ಸಾಯಂಕಾಲ : ದಯಾಭದ್ರರೆಂಬ ರಿಸಿಯರ್ . . . ಜಿನಾಲಯ ದೊಳಾಷಾಢಮಾಸದ ಚತುರ್ದಶಿಯ ದಿವಸದಂದು ಪೞಿಪೊೞ್ತು ಬಂದು ಚೋಗುಗೊಂಡಿರ್ದರ್ (ವಡ್ಡಾರಾ. ೨೬-೨೪). [ಪೞಿ₁ + ಪೊೞ್ತು]

**ಪೞ₁,** ಪಳ₁, ಪಳೆ, ಪೞಿ, ಹಳ₁, ಹಳೆ, ಹೞ, ಹೞಿ (ಸಪೂರೂ). 'ಪೞದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೞಗನ್ನಡ', 'ಪೞಗಲಿ' ಪರಾ. **ಪಳ₁:** 'ಪಳಗಬ್ಬಿಗ' ಪರಾ. **ಪಳೆ :** 'ಪಳೆಗನ್ನಡ', 'ಪಳೆವಾತು' ಪರಾ. **ಪೞಿ :** 'ಪೞಿನವಿರ್' ಪರಾ. **ಹಳ₁ :** 'ಹಳಗನ್ನಡ', 'ಹಳವಾತು' ಪರಾ. **ಹಳೆ :** 'ಹಳೆಗನ್ನಡ', 'ಹಳೆವರ' ಪರಾ. **ಹೞ :** 'ಹೞಗೂಂಟಣಿ' ಪರಾ. **ಹೞಿ :** 'ಹೞಿಗೂೞ್' ಪರಾ.

**ಪೞ₂** (ನಾ). ( ? ) : ದೇಗುಲಂ ಮಾಡಿಸಿ ಈ ಕಟ್ಟಂ ಪಡಿಸಲಿಸಲೆಂದು ಕೊಟ್ಟುದು ಯಿಾ ಪೞಂ (ಎಕ. VII, ಶಿಕಾರಿ. ೨೮೪-೨ ; 902). [ ? ]

**ಪೞಅಲಗು** (ನಾ). ಹಳೆಯ ಖಡ್ಗಧಾರೆ,-ಕತ್ತಿಯ ಬಾಯಿ : ಪೊಸಸುಗ್ಗಿ, ಪೊಸಅಡಕೆ, ಪೞಗೞವೆ, ಪೞಅಲಗು (ಭಾಷಾಭೂ. ೧೪೪ ಪ್ರಯೋ). [ಪೞ₁(<ಪೞದು) + ಅಲಗು₂]

**ಪೞಏಱು** (ನಾ). ಹಳೆಯ ಏರಿ,-ಒಡ್ಡು : ಆಗ್ನೇಯದ ದೆಸೆಗೆ ಸೀಮೆ ಕುಳಪ್ಪರ್ಗೆಱೆಯ ಒಳಗಣ ಪೞಏಱಾಯೆ (ಎಕ. IX ( S ), ಬೆಂಗಳೂ. ೧೫೧-೩೫ ; 828). [ಪೞ₁(<ಪೞದು) + ಏಱು(<ಏರಿ₁)]

**ಪೞಂಗಾಸು** (ನಾ). ( ? ) : ಪೞಂಗಾಸಿನ ಪೊನ್ನ ಗಂಟೆಯವೊಲೊಪ್ಪಿ ದುದು ದ್ಗತಭಾನುಮಂಡಲಂ (ಅಜಿಪು. ೬-೭೦). 'ಪದಂಗಾಸು₂' ಪರಾ.

[॥P ಇದು ತಮಿೞಿನ 'ಪೞಙ್ಕಾಸು'(=ಹಳೆಯ ಕಾಲದ ನಾಣ್ಯ), ಎಂಬುದಕ್ಕೆ ಸಂಬಂಧಿಸಿರಬಹುದು]

**ಪೞಕ** 'ಪಟಹ' ನೋ.

**ಪೞಗ₁,** ಪಳಗ (ನಾ). ಒಣಗಿದ ಎಲೆ ; ತರಗೆಲೆ : "ಪೞಗಂ= ಒಣಗಿದೆಲೆ" (ಶಮದ. ಪರಿ. ೧) ; "ಪೞಗಮೆನಲೊಣಗಿದೆಲೆ" (ಸಂಜೀವ. ೪); ನಡೆಗೆಟ್ಟು ತಡೆವಟ್ಟು ಕೊೞಗಂ ಪೞಗದ ನೆರೆಯ ಮಱೆಯಱೆಯೊಳ್ ಕಾಂಟದತ್ತು (ರಾಮಾಶ್ವ. ೧೩೫-೨೪). **ಪಳಗ :** ಪಳಗಂ ತಿಂದಿರ್ಪ ನೀಡುಂ ಪಸಿದುರೆ ಮರುದಾಹಾರದಿಂದೊಪ್ಪಿ ತೋರ್ಪ (ಶಾಪ್ರಾಶ. ೯೬) ; ಕೆಂದಳಿರ ನಳನಳಿಕೆ ಪಳಗಂಗಳುದಿರ್ವ ದನಿ (ಸಂಸಪ. ೩೧-೨).

[ದೇ.॥ ತಮಿ. ಪೞುಪ್ಪು = ಹಣ್ಣಾದ ಎಲೆ]

**ಪೞಗ₂** (ನಾ). ಪಟಹವಾದ್ಯವನ್ನು ಬಾರಿಸುವವನು : ಪೞಿಯವರಲ್ಲಿಗೆ ವಂದವರೊಳ್ ಸಂಭಾಷಿಸುತವಿರ್ದು ಪ[ೞಗ]ನ ಕಯ್ಯ ಪಟಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫-೧೨ ಪ).

[<ಪಟಹ + -ಗ₂]

**ಪೞಗನ್ನಡ,** ಪಳೆಗನ್ನಡ, ಹಳಗನ್ನಡ, ಹಳೆಗನ್ನಡ (ನಾ). ಪ್ರಾಚೀನವಾದ ಕನ್ನಡ : ಪೞಗನ್ನಡಮಂ ಪೊಲಗಿಡಿಸಿ ನುಡಿವರಾಗವಾ ಬಲಹೀನರ್ (ಕವಿಾ. ೧-೪೮) ; ಪೞಗನ್ನಡಂ ಪುದುಂಗೊಳೆ ಕೊೞಿ ಸಕ್ಕದಮಂ ತಗುೞ್ಚಿ ಜಾಣ್ ಕಿಡೆ ಮುತ್ತಂ ಮೆೞಸಂ ಕೋದಂತಿರೆ ಪೇೞ್ವೞಾಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾಪ. ೫೫). **ಪಳೆಗನ್ನಡ :** ಒಳುಗನ್ನಡ ಬೆಳುಗನ್ನಡ ಪಳೆಗನ್ನಡ ದೇಶಿಯಂಗಳಾ ಕನ್ನಡಮಂ ತಿಳಿ (ಕವಿಜಿ. ೪-೨). **ಹಳಗನ್ನಡ :** ನಡುಗನ್ನಡಕ್ಕೆ ಹಿಂದಿನದು "ಹಳಗನ್ನಡ" (ಕೈಪಿಡಿ. ೧) ; ಹಳಗನ್ನಡದ ನಿಯಮದಂತೆ ರಾಮಂಗೆ ಆತಂಗೆ, ಅವಳ್ಗೆ-ಎಂದಾಗುವುದಷ್ಟೆ (ಸಂಶೋಧ. ೬೧). **ಹಳೆಗನ್ನಡ :** ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹಳೆಗನ್ನಡದ ಲಿಪಿ ದ್ರಾವಿಳಲಿಪಿಯು . . . ಮೊದಲಾದ ಹಲವು ಲಿಪಿಗಳನೋದ ಬಲ್ಲಗ್ಗಳದ ಕರಣಿಕರಂ ಕರೆಸಿ (ಬಸಪು. ೫-೫೩) ; ಈ ಹೊಸಗನ್ನಡಯುಗ ದಲ್ಲಿಯೂ ಹಳೆಗನ್ನಡದ-ಅಚ್ಚಗನ್ನಡದ ಕೆಲವು ಸಾಲುಗಳು . . . ಮಿನು ಗುತ್ತವೆ (ಕಾಲೂರ. ೬ ಹರಕೆ). [ಪೞ₁(<ಪೞದು) + ಕನ್ನಡ₁]

**ಪೞಗಬ್ಬ** (ನಾ). ಹಳೆಯ ಕಾವ್ಯ ; ಪ್ರಾಚೀನ ಕಾವ್ಯ : ಎಸೆಯದೆ ಪೊೞ್ದು ಕೆಟ್ಟ ಪೞಗಬ್ಬಮನಾವಗಮೆಮ್ಮವೆಂದು ಬಾಚಿಸಿ (ಶಾಂತಿಪು. ೧೨-೭೬) ; ಪೞಗಬ್ಬಮೆಲ್ಲಮಂ ಕಕ್ಕಿಸಿ ತಿಂದು ಕಂಬಳದ ಮಾೞ್ಕೆಯ ಮಾಡುವೆನೆಂಬ ಸಾಸಿಗಂಗಕ್ಕಟ ಪೊಣ್ದು ನಿರ್ವಹಿಪುದೇನರಿದಾಯ್ತು ಮಹಾಪ್ರಬಂಧಮಂ (ಸೂಕ್ತಿಸು. ೧-೩೬). [ಪೞ₁(<ಪೞದು) + ಕಬ್ಬ₁]

**ಪೞಗಬ್ಬಿಗ,** ಪಳಗಬ್ಬಿಗ (ನಾ). ಹಿಂದಿನ ಕವಿ ; ಪ್ರಾಚೀನ ಕವಿ : ಪೞಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ ಕವಿಗಳ ವೇಷದಿಂದೆ ಕುಣಿದೇಡಿಪ ಬೞೋಡಗನೆಂದು ನಕ್ಕಪೆಂ (ಅನಂಪು. ೧-೪೬). **ಪಳಗಬ್ಬಿಗ:** ವಿಭಕ್ತಿ ಸಮಾಸ ಶಿಥಿಲಗಳಾ ಪಳಯನೇನುಂ ಪಾಡುಗವಿತೆಗಳೊಳು ವಿಚಾರಿಸ ಸಲ್ಲವೆಂಬಗ್ಗಳದ ಪಳಗಬ್ಬಿಗರ [ಪೇಳ್ಕೆಯಂ] ತೆಱದಿ ವಿರಚಿಸದೆ (ಸಾಳ್ವಭಾ. ೧-೪೫). [ಪೞ₁(<ಪೞದು) + ಕಬ್ಬಿಗ]

**ಪೞಗಲಿ** (ನಾ). ಹಿರಿಯ ವೀರ ; ಅನುಭವಿಯಾದ ಯೋಧ : ಉಬ್ಬಾಳಿಯುಳವಿಯ ಲೆಕ್ಕಕ್ಕಿೞಿದು ಬೆಸಕೆಯ್ವ ಪೞಗಲಿಗಳುಮಂ . . . ನೋಡಿ (ಗದಾಯು. ೯-೩೪ ವ). [ಪೞ₁(<ಪೞದು)+ಕಲಿ₂]

**ಪೞಗಳ್ಳ** (ನಾ). ಹಳೆಯ ಹೆಂಡ : ಪೞಗಳ್ಳಂ ಕುಡಿದುರ್ಕಿ ಸೊರ್ಕಿ ಕೆಡಪುತ್ತೋರೊರ್ವರೊಳ್ ಪೋರ್ದು ಪೊಯ್ದೞಿಯುತ್ತುಂ (ಲೀಲಾವ. ೨-೧೨೬). [ಪೞ₁(<ಪೞದು) + ಕಳ್ಳ(<ಕಳ್₃)]

**ಪೞಗೞವೆ** (ನಾ). ಹಳೆಯ ನೆಲ್ಲು,—ಬತ್ತ : ಪೞಗೞವೆಯ ಕೂೞ್ ತಿವುಡುಗಳೆದ ತೊವರಿಯ ತೊವೆ (ಕಾವ್ಯಾವ. ೨೪೧) ; ಪೊಸ ಅಡಕೆ, ಪೞಗೞವೆ (ಭಾಷಾಭೂ. ೧೪೪ ಪ್ರಯೋ). [ಪೞ₁(<ಪೞದು) + ಕೞವೆ]

**ಪೞಗಾಂಪ** (ನಾ). ಮುದಿ ದಡ್ಡ ; ವಯಸ್ಸಾದ ಮೂರ್ಖ : ಪೞಗಾಂಪರ ನುಡಿ ಮುತ್ತುಂ ಮೆೞಸುಂಗೋದಂದಂ (ಶಾಂತಿಪು. ೧೦-೧೮೧). [ಪೞ₁(<ಪೞದು) + ಗಾಂಪ]

**ಪೞಗುಂಟಣಿ,** ಹೞಗೂಂಟಣಿ (ನಾ). ವಯಸ್ಸಾದ ಕುಂಟಣಿ,—ತಲೆಹಿಡುಕಿ : ಚೆಲ್ಲದೊಳೆ ನುಡಿದು ಪೊಸಸವಿಯಲ್ಲಮನಿತ್ತಗಲೆ ನೂಂಕಿ ಕಳೆದಂ ಚದುರಂ ನಲ್ಲರೊಳೆ ನೆರೆಯಲೀಯದ ನಿರ್ಲಜ್ಜೆಯೆ ಲಜ್ಜೆ ಯೆಂಬ ಪೞಗುಂಟಣಿಯುಂ (ಲೀಲಾವ. ೧೩-೧೫). **ಹೞಗೂಂಟಣಿ :** ಹೞಗೂಂಟಣಿ ಶಿಕ್ಷಿಸಿದಳ್ ಮೃಗಾಕ್ಷಿಯುಂ (ಶಾಂತೀಶ್ವ. ೧೧-೭೭).

[ಪೞ₁(<ಪೞದು)+ಕುಂಟಣಿ]

**ಪೞಗೂೞ್,** ಹೞಿಗೂೞ್ (ನಾ). ಹಳೆಯ ಆಹಾರ ; ತಂಗಳನ್ನ : ಈ ಪೞಗೂೞ ಪಂದೆಗಳ್ಗೆಂದಿನಿತೇತಕೆಂದಿೞಾಕೆಗೆಯ್ವುದು ನೀತಮಿದಲ್ತು (ಚಕವಿ. ೫-೪೫). **ಹೞಿಗೂೞ್ :** ತಾಮಿರ್ವರುಂ ಪೋಗಿ ತಿರಿತಂದೆಂಜಲು ಹೞಿಗೂೞಾಂದೆನ್ನಂ ಸಲಹೆ (ಪೂರ್ವಪು. ೨೧).

[ಪೞ₁(<ಪೞದು)+ಕೂೞ್₁]

**ಪೞಗೆಯ್** (ನಾ). ಹಳೆಯ ಹೊಲ : ಅಸವಸದಿಂ ಪೞಗೆಯ್ಯಂ ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನವೋಲ್ ಸಸಿಯಂ ನೋಡಿ ತಳೋದರಿ ಬಿಸುಸುಯ್ಯಂ ಬಯ್ಗುಮಂತೆ ಮಾಡಿದ ಬಿದಿಯಂ (ಕಾವ್ಯಾಪ. ೪೫೪). [ಪೞ₁(<ಪೞದು) + ಕೆಯ್₄]

**ಪೞದು,** ಪಳದು, ಹಳತು, ಹಳದು, ಹೞದು (ನಾ). ೧. ಹಳೆಯದು ; ಹಿಂದಿನದು ; ಪೂರ್ವಕಾಲಕ್ಕೆ ಸೇರಿದುದು : "ಜೀರ್ಣಂ, ಜರತ್, ಪುರಾಣಂ . . . ಪುರಾತನಂ-ಈ ೬ ಪ(ಹ)ೞದು" (ಹಲಾಯು. ೧೧೮-೨೬) ; ಪೊಸತುಂ ಪೞದುಮನಱಿದು ಪರಿಯಿಸಲ್ ನೀನೆ ಬಲ್ಲೆ

(ಪಂಪಭಾ. ೫-೯೬ ವ) ; ಪೊಸತು ಪೞದೆಳದು ಪೊಱಗೋಳಗು ಸಮ ಮೆನಿಪ್ಪಿವಱೊಳಿಪ್ಪಮಂತಕ್ಕೆ ನಿಪಾತಿಸೆ ಪಡೆಗುಮವಱೊಳೊಳಗಿಂಗ ಸಂಗದಿಂ ಸಮನಿಸಿರ್ಪುಮುಳ್ಳಾದೇಶಂ (ಶಾಬ್ದ್ಯಾವ. ೨೩೯). ಪೞದು : ೧. ಪೞದೆಂದು ತೆಗೆದೊಗೆಯುಗುಂ (ಕಾಲೂರ. ೧೮೭-೯೨೫). ಹಳತು : ೧. ಛಂದಛಂದ ನವಬಂಧ ಪಡೆದು ಬಂದಿಹವು ಹಳತ ಮರೆಸಿ (ಅರಳು. ೨೪೪-೨೦) ; ಹಳತೂ ಚರ್ಚೆಗೆ ಬರಲಿ, ಹೊಸತೂ ಬರಲಿ (ಒಂಟದ. ೬೪) ; ಹಳತಿಗೆ ತೇಪೆ ಹಾಕಿ ರಿಪೇರಿ ಮಾಡುವ ಕೆಲಸದಷ್ಟು ಅವಿವೇಕ ಇನ್ನೊಂದಿಲ್ಲ (ಹಣಪ್ರ. V, ಮುನ್ನುಡಿ). (ಗು). ೨. ಹಳೆಯ ; ಪ್ರಾಚೀನ : ಹಳತು ಗ ೧॥ ಅ ಶುದ್ಧ ೧೫ ಲು ಮೈಷ್ಪಾಂನ್ನ ಸಮಾರಾಧನೆ ದಕ್ಷಿಣೆ ಸಹ ಗ|೦ . . . ಅಂತು ಹಳತು ೨॥೦ (ಮೈಅಂ. ೧೯೪೩, ೫೦-೨೫ ; 1682) ; ಹಳತು ಗ ೩ ॥ ೦ ಅಕ್ಕಾರಥಲ್ಲೂ ಯಿದೇ ಹಳತು ಆರ್ರುವರೆ ವರಹಾವಂನ್ನು . . . ನಪ್ಪಿಸಿದ ದಾನಶಾಸನ (ಮೈಅಂ. ೧೯೩೩, ೩೧-೪೦ ; 1737). ಹಳದು : ೧. ಹಳದು ವಿಾರಿ ಹೊಸದಿಲ್ಲ, ಬಿಳಿದು ವಿಾರಿ ಬಣ್ಣವಿಲ್ಲ (ಗಾದೆ). ಹಟದು : ೧. ಹಟದಪ್ಪ ಮಾತದ್ಯೆತಿಹ್ಯಮುಕ್ಕುಂ (ಮಂಗರಾ. ೨೬-೨).

ಪಳೆಯಂತೆ = ಹಿಂದಿನಂತೆ ; ಮೊದಲಿನಂತೆ : ಮತ್ತೆ ಮರವಟ್ಟಾಗಿ ಕ್ರಿಮಿಗಳ ಮೊತ್ತದಲಿ ಜನಿಸುವರು ಮನುಜರ ಸತ್ವವಹ ಪಳೆಯಂತೆ ತನ್ನಯ ಭಕುತಿಯಿಲ್ಲದಡೆ ಸುತ್ತಿ ಬಹ ಚಕ್ರದಲಿ ಸಾವುತ ಮತ್ತೆ ಹುಟ್ಟುವ ದುಃಖಸಾಗರದುತ್ತರಣವನು ಕಾಣದಿಹ ನರನಾಮುಸಖನೆಂದ (ಸಿಭಾಗ. ೧೧-೧೭-೯೨) ; ತಣ್ಣದಿರನನ್ವಯದ ಪಾರ್ಥನ ತುರಂಗಮದು ಪೆಣ್ಣುದುರೆಯಾಗಿ ಪೆರ್ಬುಲಿಯಾಗಿ ಪಳೆ[ಪಾಠಾಂ. ೞ]ಯಂತೆ ಕಱ್ಗೋಳಿಸು ವನುಲಾಶ್ವಮಾಗಿಯಾಶ್ಚರ್ಯದಿಂಸ್ತ್ರೀ ರಾಜ್ಯಮುಂ ಪೊಕ್ಕುದು (ಜೈಮಿಭಾ. ೧೫ ಸೂಚನೆ). ಪಳೆಯ ಮಾಳ್ಕೆ = ಹಿಂದಿನ ರೀತಿ ; ಮೊದಲಿನ ಬಗೆ : ದೇಶದೊಳಲ್ಲಿಗಲ್ಲಿಗೆತ್ತಿತ್ತಲುಮಾವಗಂ ಪಳೆಯ ಮಾಳ್ಕೆ ವೊಲಾದುದು ಗಂಗರಾಜನಿಂ (ಎಕ. II, ೬೩-೩೭ ; 1118). ಪಳೆಯ ರೋಗ = ಹಳೆಯ ರೋಗ ; ಬಹಳ ಕಾಲದಿಂದ ಬೇರೂರಿರುವ ವ್ಯಾಧಿ : ಪಳೆಯ ರೋಗಕೌಷಧಂಗೊಳಲ್ ನವರೋಗಮೊಲಿದು ಬಂದಂತೆ (ಜಿಬವು. ೩೩-೭). ಪಟದಾಗು = ಹಳಸಿ ಹೋಗು ; ರುಚಿಗೆಡು : ಕಾಂತೆಯರ್ಗನುರಾಗಂ ಪಟದಾಗೆ ಪುರುಷರೌಷಧಿಗ್ಳುಳಿಗೆಯವೊಲ್ ಮನಕ್ಕೆ ಹೇಯಮಂ ಪುಟ್ಟಿಸುಗುಂ (ದಶಕು. ೪-೯೫). ಪಟೆಯ, ಪಳೆಯ, ಹಳೆಯ = ವಯಸ್ಸಾದವನು ; ಹಿರಿಯ ; ವೃದ್ಧ : ಮುನ್ನಂ ಪಟೆಯರುಮನಾಪ್ತರುಮಂ ಪೊಱಗಿಕ್ಕಿ (ಪಂಚತಂ.೧೪೫-೧೯) ; ಪುರದೊಳಗಣ ಭವ್ಯಜನರುಂ ಪಟೆಯರುಂ ಪ್ರಧಾನರುಂ . . . ಕಾಗಿಸಿ (ಧರ್ಮಾಮೃ. ೮-೨೦೬) ; ಸಂದಾಯಿಯೆಂಬ ಪಳೆಯನ ಕೈಯೊಳಾಗಳೆ ಕೊಟ್ಟ ಶಿರಗೊಯ್ದು ಪಳೀವುದೆನೆ (ಭೈರವೇ. ೧-೨೬೪) ; ಅಂದಿಂಗೆಳೆಯ ನೀನು ಹಳೆಯ ನಾನು (ಬಸವ. ೨) ; ಹಳೆಯರನು ಸೇವಕರನಾಪ್ತರ ಬಳಗವನು ನಿಜಮಂತ್ರಿವರ್ಗವನುಳಿದು ತಾನನುಚಿತದಿ ದುರ್ಜನರುಗಳ ಪಾಲಿಸಿದ ಫಲವು ಕೈಯೊಡನಾಯ್ತು (ಜೀವಂಚ. ೪-೬೩) ; ಹಳೆಯನಹೆ ನರೆಗೂಡದಲೊಂದಿಲ್ಲ (ಸಿಭಾಗ. ೫-೭-೮). ಪಟೆಯ ಪಾಡಿ = ಹಳೆಯ ಸೈನ್ಯ ; ಹಿಂದಿನ ಸೇನೆ : ಅಂತು ಬಿಡಂಗುವೆತ್ತು ನಡೆವ ಪುಸಿವಡೆಯ ಪೆಱಗೆ ಪಟೆಯ ಪಾಡಿಯಂ ಕೂಡಿಕೊಂಡು . . . ನಡೆದಂ ಕಾವಂ (ಕಬ್ಬಿಕಾ. ೨೦೮). ಪಟೆಯ ಬೇವಿನೆಣ್ಣೆ = ಹಳೆಯದಾದ ಬೇವಿನೆಣ್ಣೆ : ಕನಲ್ವ ಕೆಂಡದ ಮೇಲೆ ಪಟೆಯ ಬೇವಿನೆಣ್ಣೆಯೊಳ್ ಕೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ . . . ಬೇವ ಪೆಣಂಗಳ ಕ[ಂ]ಪು ನಾಱುವುದರ್ಕೆ ಸೈರಿಸಲಾಱದೆ (ಪಂಪಭಾ. ೧೩-೭೧ ವ). ಪಟೆಯ ಸೀರೆ, ಹಳೆಯ ಸೀರೆ, ಹಳೇಸೀರೆ, ಹಟೆಯ ಸೀರೆ = ಹಳೆಯದಾದ ಬಟ್ಟೆ ; ಹಳತಾದ ವಸ್ತ್ರ : ಪಟೆಯ ಸೀರೆಯಂತೆ ಗುಣದೊಳ್ ನೂನಮಾಗದೆ (ಧರ್ಮಾಮೃ. ೫-೯೯) ; ಅವಳು ಬಣ್ಣ ಮಾಸಿದ ಹಳೆಯ ಸೀರೆಯನ್ನು ಉಟ್ಟಿದ್ದಳು (ರೂಢಿ) ; ನನ್ನ ಹಳೇ ಸೀರೆ ಹರಿದು ಹೋಯಿತು (ರೂಢಿ); "ಪಟಚ್ಚರಮೆಂಬುದು ಹಟೆಯ ಸೀರೆ" (ಹಲಾಯು. ೯೦-೩೯೬) ; "ಪಟಚ್ಚರ, ಜೀರ್ಣವಸ್ತ್ರ—ಹಟೆಯ ಸೀರೆ" (ನಾಚಿರಾ. ೬). ಹಳೆಪೈಕ, ಹಳೆಯ ಪಯಿಕ, ಹಳೆಯ ಪೈಕ, ಹಳೇಪೈಕ = ೧. ಹೆಂಡ ಇಳಿಸುವುದೇ ಕುಲವೃತ್ತಿಯಾಗುಳ್ಳ ಒಂದು ಜಾತಿ ಹಾಗೂ ಅದಕ್ಕೆ ಸೇರಿದ ವ್ಯಕ್ತಿ ; ಈಡಿಗ : ಹಳೆಪೈಕದವರ ಗ್ರಾಮಾಂತ್ರಗಳಂಬಾ ವರುಷ ೧ಕ್ಕೆ ವರ್ತನೆ (ಎಕ. XII, ಮದ್ದಗಿ. ೩೧-೩ ; 1656) ; ಹಳೆಪೈಕರು—ಇವರು ಕಾನಡಾಜಿಲ್ಲೆಯಲ್ಲಿಯೂ ಧಾರವಾಡಜಿಲ್ಲೆಯ ದಕ್ಷಿಣಭಾಗದಲ್ಲಿಯೂ ಮಾತ್ರ ಇರುತ್ತಾರೆ (ಕಭಾಗ. ೧೭೭) ; ಯಳವರ್ಷ ಹಳೇಪೈಕದ ಗಿರಿಯನೆಂಬ ದಂಡಿಗೇ ದಾಸನ ಮೈಮೇಲೆ ದೇವತೆಯು ಬಂದು . . . ಪಚಾರಿಸಿದಳಂತೆ (ಚಿತ್ರಪಾ. ೭) ; ನಮಗೋಸ್ಕರ ನಮ್ಮ ಹಳೇಪೈಕದವರು ಕೆಲಸ ಮಾಡುವುದಿಲ್ಲವೆ ? (ಸುಮತಿ. ೭೮). ೨. ಒಂದು ವಿಶಿಷ್ಟ ಪರಿಚಾರಕವರ್ಗ : ತಂತಮ್ಮ ಸೆಜ್ಜೆಗಳಲ್ಲಿ ಪಲತೆರಗಳಿಂದ ಸ್ಥಿರರಾಗಿರುವ ಮಹಾರಾಜವಂಶದವರು, ಸಾಮನ್ತರು . . . ಹಳೆಯ ಪಯಿಕದವರು ದಣ್ಣನಾಯಕರು (ಬಿಟ್ಟಅ. ೩೦-೪) ; ತಳುವದೆ ಬೆಟ್ಟದ ಚಾಮೇಂದ್ರ ಸಾಕಿದ ಹಳೆಯ ಪೈಕದ ನಾಯಕರು ಒಳಹೊಕ್ಕು ವೈರಿ ಮಾರ್ಬಲವನು ಸದೆದಾಗ ಕಳಕಳವನು ಮಾಡಿದರು (ಕಂಠವಿ. ೩-೭೯); ಎಳದು ಮೃಗವನು ಕೊಲ್ವ ಹಳೆಯ ಪೈಕದ ಮಂದಿ ಒದಗೆ (ಕುಮಾರಾಂ. ೧೪೪). [ದೇ॰॥ ತಮಿ. ಮಲ. ಪಟ ; ತುಳು. ಪರ ; ಕೊಡ. ಪಳೆ]

ಪೞನವಿರ್, ಪೞೆನವಿರ್ (ನಾ). ೧. ಹಳೆಯ ಕೂದಲು : ಪಂದಿಗಳುಂ ಪೞನವಿರಿಕ್ಕಿದುವು (ಪಂಪಭಾ. ೫-೩೮); ಮೂಷೆಯಿಟ್ಟಱಗಿದ ಮಾಟ್ಕೆಯಿಂ ಪೞನವಿರ್ ಮೊದಲಿಂದೆ ಕೞಲ್ದು ಬೆಳ್ನವಿರ್ ತುಱುಗಿ (ಸೂಕ್ತಿಸು. ೩-೩೭). ಪೞೆನವಿರ್ : ೨. ನರೆತ ಕೂದಲು : ಪೞೆನವಿರೆಲ್ಲಂ ಮೆಯ್ಯುಂ ತಳೆದುಂ ಬೆಳ್ಪಗಳಾಗಿ ತೀದಿರ್ದುವು (ಸೂಕ್ತಿಸು. ೩-೯೩). [ಪೞ₁ (<ಪೞದು) + ನವಿರ್]

ಪೞನೀರ್, ಹಳೆನೀರು (ನಾ). ಬಹಳ ದಿನಗಳಿಂದ ಶೇಖರಿಸಿಟ್ಟ ನೀರು ; ಹಳೆಯ ನೀರು : ಸಾರವೊಪ್ಪುತ್ತರಣೆಯ ಬೇರಂ ಸೈಂಧವಸಮನ್ವಿತಂ ಪೞನೀರಿಂದೋರಂತರೆ ಕಿಸುವೊನ್ನೊಳ್ ಱಱಸಿ ಕೊಂಡೆಚ್ಚೆ ನೇತ್ರರೋಗಂ ಕಿಡುಗುಂ (ಲೋಕೋಪ. ೯-೬೮) ; ಪೀರ್ದ ಪೞನೀರ್ಗಳನಟ್ಟುಕಲಾಱದೆಯ್ದೆ ಕಂಟಳಿಸಿ ಮಗುಟ್ಟುದಪ್ಪುದು (ಲೀಲಾವ. ೧೨-೩೮) ; ಪೞ[ಪಾಠಾಂ. ಎಳೆ]ನೀರಿಂದಂ ಮರ್ದಿಸಿ ಚಳೆಯದೊಳಂ ಪೂಸೆ ಕಿಱುಯ ಕುಟಜದ ಬಿತ್ತಂ ಕೊಟೆವಾವಿನ ಶೂರ್ಯನ ವಿಷಮುಱಗುಂ (ಖಮದ. ೧೦-೬೮). ಹಳೆನೀರು: ದಾಹಕ್ಕೆ ಹಳೆನೀರಂ ಬೆಚ್ಚಗೆ ಮಾಡಿ ಕುಡಿಯ ಕೊಡುವುದು (ಸಕವೈ. ೭೭). [ಪೞ₁(<ಪೞದು)+ನೀರ್]

ಪೞನುಡಿ, ಪಳನುಡಿ, ಪಳೆನುಡಿ (ನಾ). ಪ್ರಾಚೀನವಾದ ಮಾತು ; ವೇದ: ಪೞನುಡಿಯಂ ಪರ್ಚಿದ ಮುನಿಗಳ ಪೊಗಟ್ಟುನಮುಂದು ಕುವರನಾದ ವೊಲಾದಂ ನಿಳಯಂಗೆ ನಿಖಿಲಗುಣದೊಳ್ಗಿಲೆಯಂಗಳಸಿಂಗರಾರ್ಯವರ್ಯಂ ಗೀಗಳ್ (ಚಿಕವಿ. ೪-೧೯) ; ಪೞನುಡಿಯಂ ಬಟಿಸಂದು ಪಲವುಂ ಪಗಲ್ ತಿರಿಯಂ ಪೊರೆಯುತೆ (ರಾಮಾಶ್ವ. ೭-೧೧). ಪಳನುಡಿ : ಕಾವ ಪಳನುಡಿಯೊಡೆಯನ ವಾಹನನು ನೀನು (ವಿಜೀಗೀ. ೨೧-೭). ಪಳೆನುಡಿ: ರಂಗ ನಿನ್ನಯ ಸಂಕುಗೊರಲ ಗೋಚರದಿಂದ ಹಿಂಗುಗ್ರ ಗಡ ಭವಪಾಶ ಹಿಂಗೆಂಬ ಪಳೆನುಡಿಯರ್ಥವೆನ್ನೆರ್ದೆಯೊಳು ಮುಂಗುಡಿಗಟ್ಟಿರುತಿರ್ಕೆ (ಶತಸಾಂ. ೩-೧೪). [ಪೞ₁(<ಪೞದು) + ನುಡಿ₂]

ಪೞಪೞ, ಪಳಪಳ, ಪಟ್ಪಟ (ನಾ). ಒಂದು ಅನುಕರಣ ಶಬ್ದ : ಪೞಪೞಯೆಂದಾಲಿಕಲ್ಗಳುದಿರ್ದುವು ನಭದಿಂ (ಶಮದ. ೫೪ ಪ್ರಯೋ).

**ಪೞಪೞ :** ಮಜ್ಜಿಗೆ ಹಾಕುವಾಗ ಏನೋ ಪಳಪಳ ಹೊಳೆಯುವುದನ್ನು ಕಂಡಳು (ತ್ಯಾಗಮು. ೧೦೬). **ಪೞ್ಪೞ :** 'ಪೞ್ಪೞನೆ' ಪರಾ.

**ಪೞಪೞನೆ,** ಪಳಪಳನೆ, ಪೞ್ಪೞನೆ (ಅ). ಒಂದು ಅನುಕರಣಾವ್ಯಯ : ಕನಕಪ್ರಾಸಾದಪಂಕ್ತಿಗಳ್ ಪೞಪೞನೆ ಬೆಳಗುವ ಸೊಡರ್ಗಳ ನಾದಿತ್ಯನ ನಂಟರೆಂದು ತಮೋರಾಜಕಂ ಮುಳಿದು ಸೆಱೆಗೆಯ್ದು ಬೆಳಗಿನ ಸೆಱೆಯ ಮನೆಗಳನ್ನವಾದುವು (ಪಂಪಭಾ. ೪–೪೯ ವ) ; ಕೆಯ್ದೀವಿಗೆಗಳ್ ಪೞಪೞನೆಸೆದಿರೆ (ಶಾಂತಿಪು. ೮–೬೪). **ಪೞಪೞನೆ :** ಮರುಳ್ಗಳಾಟಮಂ ಪಳಪಳನೆಮೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ (ಪಂಪಭಾ. ೧೦–೧೧೬ ವ) ; ಪಳಪಳನೆ ಸುರಿಯುತಿರೆ ಮಾತುಗಳ ಮುತ್ತುಮಳೆ ಕಡುಬಡವನಂತಾದನರ್ಜುನಂ (ಚಿತ್ರಾಂಗ. ೩೫–೯೫೭). **ಪೞ್ಪೞನೆ :** "ಪೞಪೞನೆ, ಪೞ್ಪೞನೆ–ವಿರಲಾರ್ಥಂ" (ಶಮದ. ಪರಿ. ೧).

[ಪೞಪೞ+-ಅನೆ₁]

**ಪೞಪು** (ನಾ). ನರೆತ ಕೂದಲಿಗೆ ಹಚ್ಚುವ ಕಪ್ಪುಬಣ್ಣ ; ಕಲಪು: "ಪೞಪು (ಪೞವು) – ನರೆಗಿಕ್ಕುವ ಕರ್ಪು" (ಶಮದ. ಪರಿ. ೧) ; ಪೞವು, ಪೊೞಪು (ಶಬ್ದಾನು. ೧೪೦ ವ್ಯಾಖ್ಯಾ). [ ? ]

**ಪೞಮಱವು** (ನಾ). ಹಳೆಯದಾಗಿ ಮರೆತುಹೋದುದು : ಪಟ್ಟಸೂತ್ರದೆರಡೆಱೆಯುಮಂ ಗಂಟಿಕ್ಕುವಂತೆ ಪರಂಪರಮುಂ ಪೞಮಱವುಮಾದ ನಣ್ಪಂ ಪುನರ್ನವಂ ಮಾಡ್ಪ ಬಗೆಯಿಂ ಎನ್ನನಿಂತೆಂದಟ್ಟಿದ ನೆಮ್ಮರಸಂ (ಶಾಂತಿಪು. ೫–೩೭ ವ).

[ಪೞ₁(<ಪೞದು) + ಮಱವು (<ಮಱವು)]

**ಪೞಮೆ,** ಪಳಮೆ, ಹಳಮೆ₁ (ನಾ). ಹಳೆತನ ; ಪ್ರಾಚೀನತೆ ; ಪುರಾತನತೆ : ನೀಂ ಪೞಮೆಯನೆ ತೋಱೆ ಕೀಱೆ ಕೆಡೆನುಡಿದಪೆ (ಪಂಚತಂ. ೧೦೬–೮) ; ಪೞಮೆಯ ದೇವರ ಮೇಲೆಂತಯ್ . . . ಮೆಱೆದಪ್ಪಯ್ ! (ಬದ್ಧಪ್ರ. ೨೨–೪೬೫). 'ಪೞವೆ' ಪರಾ. **ಪಳಮೆ :** ಪಳಮೆಯಾಳದ ಕಣ್ಣನೆನ್ನ ಕಣ್ಣಲಿ ನೆಟ್ಟು (ಹೊಂಗಳು. ೧೭–೧೬). **ಹಳಮೆ₁ :** ಬಳಸಿನಲಿ ಬಂದಿಹರ ಕಾಣುತಿಹೆನು . . . ಹಳಮೆಯ ಮಹಾತ್ಮರನು ಪರಮುಕವಿಗಳನು (ಇಂಗೀತ. ೯೩–೪) ; ಭಾರತದೇಶದ ಇತಿಹಾಸಕ್ಕೆ ಇರುವಷ್ಟು ಹಳಮೆ, ಹಿರಿಮೆ ಪ್ರಪಂಚದ ಬೇರೆ ಯಾವ ದೇಶಕ್ಕೂ ಇಲ್ಲ (ಭಾರದ. ೪೧೬) ; ೭ನೆಯ ಶತಕದ ಬಾದಾಮಿಶಾಸನವು ತ್ರಿಪದಿಯ ಹಳಮೆಯನ್ನು ತಿಳಿಸುವುದಲ್ಲದೆ . . . ಒಬ್ಬ ಕಲಿಯ ಶಬ್ದ ಚಿತ್ರವನ್ನು ಕೊಡುತ್ತದೆ (ತವಾ. ೧). [ಪೞ₁(<ಪೞದು)+-ಮೆ₃]

**ಪೞಯಿಂಗೆ** (ನಾ). ( ? ) : ×× ನಮೆಸ್ಯ ನೆತ್ತರೊಗೊಡೆ[ಬಾ]ಟೆ ಮಱುವಳ್ಕ ××× ವ ಪೞಯಿಙ್ಗೆ[ಗೊ]ಳ್ದೊಡೆ ಬಾಟೆನೆನ್ನೀವೃತ[ಂ]ಗಳಂ ಸಲಿಸುತ್ತು (ಸೌಇಇ. XI–i, ೧೦–೧೦ ; 864). [ ? ]

**ಪೞಯಿಗೆ,** ಪಳಯಿಗೆ, ಪಳವಿಗೆ, ಪಟಿವಿಗೆ, ಹಳಯಿಗೆ, ಹಳವಿಗೆ, ಹಟಿಯಿಗೆ, ಹಟಿವಿಗೆ (ನಾ). ಧ್ವಜ ; ಪತಾಕೆ ; ಬಾವುಟ : "ಪೞಯಿಗೆಯೆಂದು ಕೇತನದೊಳಂ" (ಕರ್ನಾಶಿ. ೭೯) ; ಪೞಯಿಗೆ ಬಿಟ್ಟೊಡೆ ಬೀರದ ಪೞವಿಗೆಯ ನಿಜಾಸಲೆಂದೆ ಹರಿವಕ್ಷಮನಲ್ಲಾಬೋಗೆಯೆಚ್ಚು (ಪಂಪಭಾ. ೧೨–೨೦೯) ; ದಿನಕರನ ಹಯಂ ಗಗನಾಧ್ವಖೇದಮಂ ಪೞಯಿಗೆಗಳ ತಣ್ಣೆಲರ ಶೀಟದಿಂ ತೊಲಗಿಸುಗುಂ (ಪಂರಾಮಾ. ೧–೧೧೬). **ಪಳಯಿಗೆ :** ಸಾರದಿರಿತ್ತಲು ಮುಳಿದಡೆ ಮಾರಿಗಳೀ ಪಾರ್ವ್ವರೆಂದು ಕಲಿಯಂ ದೇವಾಗಾರದ ಪಳಯಿಗೆ ದೂರದೆ ಬಾಗಿಸುವನ್ತಿರ್ದ್ದಮಲ್ಲಿ ವಾತೋದ್ಧೂತಂ (ಸೌಇಇ. IX–i, ೧೫೮-೪೬ ; 1092) ; ಮಿಳಿರ್ವ ಪಳಯಿಗೆ . . . ಚಾಮರನಿಚಯದಿಂದೆ ಸಿಂಗರಿಸಿರ್ದ ಥಳಥಳಿಪ ಮಣಿರಥಾವಳಿಗಳು ಪಳಂಚಿದವು (ಸಾಳ್ವಭಾ. ೨೫–೧೭) ; ಕರವಿದೆ ನನ್ನಿಯೆಸುತ್ತುಂ ಬಿರಿದಿನ ಪಳಯಿಗೆಯನೆತ್ತಿ ಸುತ್ತಿ ಸೆದಿರ್ದಂ (ನೃಪವಿ. ೩೭–೮). **ಪಳವಿಗೆ :** "ಪಳವಿಗೆ ಕೇತನಕೆ ನಾಮಂ" (ಭಾರತಿ. ೪೧) ; ಬಗಿದು ಪಾತಾಳವಮಂ ಮುಟ್ಟುವಗಳುದ್ದದಿಂ ನೆಗಳ್ದಂಬರ ದೊಳೆಸೆವ ಪ[ಪಾಠಾಂ.ಹ]ಳವಿಗೆಗಳೊಪ್ಪದಿಂ (ಏಕಾಂರ. ಹ. ೨೮೧–೨) ; ಪಲಪಲ ತೆಱದ ಪಳವಿಗೆಯ . . . ರಥದೊಳಗೆ ನಿಂದನು ಶಕ್ರಸಾರಥಿ ನುಡಿಸಿದನು ನರನ (ಕುವ್ಯಾಅ. ಓರಿಇ. ೮–೧೪) ; ಪಳವಿಗೆಯ ಹನುಮನಂ ಪಲ್ಗಿರಿಸಿ ಹರಿಯನೆಚ್ಚು . . . ಸಾತ್ಯಕಿ ಬಭ್ರುವಾಹನಾದಿಗಳನುಱೆ ನೋಯಿಸಿದನು (ಜೈಮಿಭಾ. ೨೫–೩೯). **ಪಟಿವಿಗೆ :** "ಪಟಿವಿಗೆ (ಪಟಿಯಿಗೆ) ಕೇತನಂ" (ಶಮದ. ಪರಿ. ೧) ; ಅನೇಕ ಪ್ರಾಸಾದದ ಮೇಲೆ ಚಿತ್ರದ ಪಟಿವಿಗೆಗಳಂ ತುಱುಗಲುಂ ಬಂಬಲ್ಗಳುಮಾಗೆ ಕಟ್ಟಿಸಿ (ಪಂಪಭಾ. ೩–೪೦ ವ) ; ಪೊಂಬಾಟೆಯ ಪಟಿವಿಗೆಗಳೊಳಂ . . . ಸೊಂಪುವಡೆದ ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಕಾ. ೧೧೮) ; ಪಟ್ಟವಣಿಯುಂ ಪಟಿವಿಗೆಯುಂ . . . ಮೇಲ್ಕಟ್ಟುಂ ಒಳ್ಗಳೆಯನು ಮೂಟೆಗದವನುಮಾಗಿಯುಂ ತಣಿಯದೆ (ಚಿಕಪಂ. ೮೫–೨೧). **ಹಳಯಿಗೆ :** ರಾಜಮುದ್ರೆ, ನಾಡ ಹಳಯಿಗೆ ಮತ್ತು ನಾಡ ಶಾಸನ ಇವುಗಳ ಗೌರವವನ್ನು ಕಾಪಾಡುವುದರಲ್ಲಿ . . . ಪ್ರಾಣವನ್ನೇ ಪಣವಾಗಿರಿಸುವವನು (ಕಪವು. ೭–೮೮) ; ಚೋಳರ ಹಳಯಿಗೆಯನ್ನು ಇಳಿಸಿ ಹೊಯ್ಸಳ ಹಳಯಿಗೆಯನ್ನು ಏರಿಸಿದ ಸಂಭ್ರಮ ಸಡಗರಗಳ ಪ್ರದರ್ಶನವಾಯಿತು (ಸವತಿ. ೩). **ಹಳವಿಗೆ :** ಹೊಳೆವ ಸಿಂಧ ಪತಾಕೆ ಹಳವಿಗೆ (ಕೌತಿರಾ. ೧೬–೪೧) ; ನವಹೇಮದಂಡದ ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ (ಕುವ್ಯಾದ್ರೋ. ೧೦–೪೧) ; ಬಾಲದಲಾ ವರೂಥದ ಹಳವಿಗೆಯ ಕಂಭದಲಿ ಬಿಗಿದು (ತೊರರಾ. ೬–೨೨-೧೩) ; ದಳದ ಸಿಂಗಾರದಲಿ ಬಿರುದಿನ ಹಳವಿಗೆಯನೆತ್ತಿಸಲಿ (ತಿಮ್ಮಅ. ೬–೧೨). **ಹಟಿಯಿಗೆ :** ಉಚ್ಛ್ರೂಡಾ, ಅವಚೂಡಾ–ಈ ೨ (ಪರಿವಿಡಿಯಿಂ) ಹಟಿಯಿಗೆಯ ಮೇ(ಎ)ಲೆ ಮೊಗದ ಕೆಟಗೆ ಕಟ್ಟಿದ ಕುಂಚಂ (ಹಲಾಯು. ೭೫–೩೦೪). **ಹಟಿವಿಗೆ :** ಗರುಡನಂತೆ ಹಾವಿನ ಹಟಿವಿಗೆಯನಾರಯ್ದು ನೋಡಿಯುಂ (ಗದಾಯು. ೬–೨೮ ವ) ; ಹಟಿವಿಗೆ ನಮ್ಮದೀ ರಥಮಿದಪ್ಪೊಡೆ ನಮ್ಮದು (ಕುಸುಮಾ. ೧೨–೫೧). [<ಪ್ರಾ. ಪಡಾಇಯಾ./ಸಂ. ಪತಾಕಿಕಾ]

**ಪೞವ** 'ಪಟಿಹ' ನೋ.

**ಪೞವಂಡು** (ನಾ). ಶೇಖರವಾದ ಮಕರಂದ ; ಸಂಗ್ರಹಗೊಂಡ ಮಧು : ಕುಮುದಕೇಸರದ ರಜದೊಳರ್ದ ಚರಣಚಯಮಂ ಕೀಟಲಾಱದೆ ಪೞವಂಡಿನೊಳ್ಪಿಂಡುನೆಗೆದು ಪೊರಳ್ದು ನರಳ್ದು ಮೊರೆವ ಮಱಿದುಂಬಿಗಳ ಗಱೆಯುಂ ಗಿಜ್ಜನೆ ತೆಗೆದು ನೆಗಪಿಯುಂ (ಲೀಲಾವ. ೩–೨೦ ವ).

[ಪೞ₁(<ಪೞದು)+ಬಂಡು₂]

**ಪೞವಗೆ,** ಹಳೆಹಗೆ (ನಾ). ಹಿಂದಿನಿಂದಲೂ ಶತ್ರುವಾಗಿರುವವನು; ಬಹಳಕಾಲದ ವೈರಿ : ಪೞವಗೆಗಳಾರುಮಂ ಗೆಲ್ದಳವಿಂ ಕೈಯಿಕ್ಕಿ ನಿಂದ ಕಲಿಯೆಂದುಂ ತನ್ನೊಳಗುಂ ಪೊಱಗುಂ ತೋಱದ ಬಱಿಯಂಗೆಱಗಿರ್ದ ಬಾಟ್ಬುದೀ ಮೂಲೋಕಂ (ಕಬ್ಬಿಕಾ. ೨೩೦). **ಹಳೆಹಗೆ :** ಕೆಳೆಯನೇ ಹಳೆಹಗೆಯೆಯೆಂಬವೋಲ್ ಮಳೆಕಡೆಗೆ ಮಲೆನಾಡುಗಳ ನೋಡಿ ಹಿನ್ನಡೆಯುತಿರಲು (ಕಾಲೂರ. ೫೭-೯೨). [ಪೞ₁(<ಪೞದು)+ಪಗೆ₂]

**ಪೞವಟ್ಟೆ** (ನಾ). ಹಳೆಯದಾಗಿ ಸವೆದ ದಾರಿ : ಬಟ್ಟೆಗಳ್ಕೆದೆ ನುರ್ಗಿ ಪೞವಟ್ಟೆವೊಲಾಗೆ (ದಶಕು. ೭–೬೭).

[ಪೞ₁(<ಪೞದು) + ಬಟ್ಟೆ₁]

**ಪೞವರ,** ಹಳೆಮರ, ಹಳೆವರ (ನಾ). ೧. ಬಹುಕಾಲದಿಂದಿರುವ ಮರ. ೨. ಹಳೆಯದಾದ ಮರದ ಕೋಳ : ನಿನ್ನಾಜ್ಞೆಗೋಸ್ಗಂ ಕೋಳಂ ನೆಲಸಿತ್ತೆನ್ನ ಕರದೊಳಲ್ಲದೆ ಕೇಳಾನಿನ್ನೋರ್ವರ ಬಗೆವೆನೆ ನೋಡೆನ್ನಳವನೆನುತ್ತೆ ನುರ್ಗಿದಂ ಪೞವರನಂ (ದಶಕು. ೯–೩೧).

**ಹಳೆಮರ:** ೧. ನಮ್ಮ ಮನೆಯ ಎದುರಿನಲ್ಲೊಂದು ನೂರುವರ್ಷಗಳಷ್ಟು ಹಿಂದಿನ ಹಳೆಮರವಿದೆ (ರೂಢಿ). **ಹಳೆಮರ:** ೩. ಒಣಗಿದ ಮರ; ಒಣಮರ: ಒಟ್ಟಿದರು ತಾಳೇಳಜುದ್ದದಲಿಟ್ಟಣಿಸಿ ಹಳೆಮರವನುರಿಗಳಲಿಟ್ಟು ಬೊಬ್ಬಿಟ್ಟದಬ್ಬರಿಸಿದರು ನಾಲ್ಕುಮೈಗಳಲಿ (ತೊರಂ. ೫-೬-೯). [ಪೞ$_1$(<ಪೞದು) + ಮರ$_1$]

**ಪೞವಲ್** (ನಾ). ಹಳೆಯದಾದ ಹಲ್ಲು; ಸವೆದ ಹಲ್ಲು: ನರೆದಲೆ ಬೇರ್ಬಿಟಲ್ದ ಪೞವಲ್ ಕಲೆಗಳ್ ತುಱುಗಿರ್ದ ಮೆಯ್ (ದಶಕು. ೮-೧೨).

[ಪೞ$_1$(<ಪೞದು) + ಪಲ್]

**ಪೞವಱಿಗೋಲ್** (ನಾ). ಹಳೆಯ ಹರಿಗೋಲು; ಜೀರ್ಣವಾದ ದೋಣಿ: ಇಱಿದೇಱುವೊಟಂ ಗಂಡರೊಳಳಿಪೆಂಬುದು ತನಗೆ ಮುತ್ತಮುಂದುಗೂಂಟಣಿ ತಾಂ ಕೞಿವಣ್ ಮುತ್ತದ ಪೆಣ್ತಲೆ ಪೞವಱಿಗೋಲ್ ಪೞಿದ ಭೇರಿ ನೀರ್ ತೆಗೆದ ಕೊಳಂ (ಸೂಕ್ತಿಸು. ೮-೩೮೨).

[ಪೞ$_1$(<ಪೞದು) + ಪಱಿಗೋಲ್]

**ಪೞವಾಡ** (ನಾ). ಕುಗ್ರಾಮ; ಬೇಚಿರಾಕುಗ್ರಾಮ: ಪೞವಾಡಯ್ದನೆ ಬೇಡೆಯುಂ ಕುಡದ ನಾನೇನೆಂದು ಸಂಧಾನಮಂ ಗಱಿಯಿಪ್ಪೆಂ (ಪಂಪಭಾ. ೧೩-೨೪). [ಪೞ$_1$(<ಪೞದು)+ಬಾಡ$_1$]

**ಪೞವಾತು,** ಪಳಮಾತು, ಪಳವಾತು, ಪಳೆವಾತು, ಹಳವಾತು, ಹಳೆಮಾತು (ನಾ). ೧. ಪ್ರಾಚೀನವಾದ ನುಡಿ; ವೇದ: "ಓದು, ಪೞವಾತು, ಬೇದಂ, ಸುತಿ–ಈ ೪ ವೇದಂ" (ಕಶಸಾ. ೫೬-೨೪೨); ಜಗದೊಳ್ ಶ್ರೀಚಕದೇವನಿಂ ಪಿರಿಯರಿಲ್ಲೆತ್ತಾನುಮುಂಟಾದೊಡಂ ಬಗೆಗೊಳ್ಗಂ ಪೞವಾತಿನೊಳ್ . . . ಮೆಯ್ದೋಱದಿನ್ನೆಲ್ಲಿಯುಂ (ಗೀತಗೋ. ೨-೫); ಒಂದೆಡೆಯೊಳ್ ಪೞವಾತಂ ನುಡಿಯುತೆ ಜನ್ನದಾರಮಂ ಪೊಸೆಯುತಿರ್ಪರ್ (ಅದ್ಭುತ. ೧-೧೦). ೨. ಪರಂಪರೆಯಿಂದ ಬಂದ ನುಡಿ; ಐತಿಹ್ಯ: "ಪೞವಾತು-ಐತಿಹ್ಯಮೆಂಬುದು" (ಹಲಾಯು. ೨೪-೧೪೬). **ಪಳಮಾತು:** ೨. ಅಂಗಗುಣ ಲಿಂಗಕ್ಕಾಯಿತ್ತು ಲಿಂಗಗುಣ ಅಂಗಕ್ಕಾಯಿತ್ತು ಇವೆಲ್ಲ ಭಾವಸಂಕಲ್ಪವಿಕಲ್ಪವು ಅಂಗಲಿಂಗಮೆಂಬುದು ಪಳಮಾತು (ಸಿದ್ಧವ. ಕ. ೪೧೬-೧೩೪೪). **ಪಳವಾತು:** ೧. ಹೋಳ್ದೊಡಲ ನಱುವಾಯನ್ನೆಯ ಸೀರ್ಗುಡಿಗನಂ ಸೀಳ್ದ ಪಳವಾತಿಗೊಳಗಾಗದಾರೆಗೆ ತನ್ನ ಬಾಳ್ದೆಳೆಯುಗುಡದ ಮೂವಚ್ಚಿಯ್ಯಮೊಗದ ಶಿವ ಸುಮ್ಮಾನದಿಂ ಸಲಹುಗೆ (ನಂವಿಮಾ. ೨೧-೫೪); ರವಿ ಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಳ[ಪಾಠಾಂ. ಳೆ]ವಾತಶ್ವಂ (ಶಬಶಂ. ೨-೧೨); ಪಳವಾತನನುಸರಿಸದಿಹ ವಿದ್ಯೆಯಂದದಿಂ ತೊಳಪ ಸಂಸ್ಕಾರವಿರಹಿತವಾಣಿಯಂದದಿಂ (ವೆಂಕಾಂ. ೫-೮-೨). **ಪಳೆವಾತು:** ೧. "ಪಳೆವಾತೆನಿಕ್ಕು ವೇದಂ" (ಕಶರ. ೬೩); ಪಳೆವಾತುಗಳೆ ಸೋಣಗಗಳಾಗಲೆಸೆದನ ಮೃತ್ಯುಂಜಯನಾಯೆಸ್ಸಿರೊ (ಭಕ್ತಿಸ. I, ೨-೨); ಪಳೆವಾತಿನಧಿಕತೆಯ . . . ಆರಾದೊಡಂ ವಿಚಾರಿ ಬಳಸುವರೆ (ವೆಂಕಾಂ. ೨-೮-೬). **ಹಳವಾತು:** ೧. ಹಳವಾತೆ ಹುಸಿ ತೊಳೆದು ಡೊಳೆಹೊಳೆದು ಹುತ್ತಿನ ಹೊಳೆ ಹರಿದು ಬಂದಂತೆ ಹೊಸದಾಗಿವೆ (ಮುಕ್ತಕಂ. ೯-೪೩). **ಹಳೆಮಾತು:** ೩. ಮರೆಯುವಷ್ಟು ಹಳೆಯದಾದ ವಿಷಯ: ಅದು ನಮಗೆ ದಕ್ಕಿ ಹಳೆಮಾತು ಆಗಿಹೋಯಿತು (ರೂಢಿ).

[ಪೞ$_1$(<ಪೞದು) + ಮಾತು$_1$]

**ಪೞವಾನಿಸ** (ನಾ). ಹಿರಿಯ ಮನುಷ್ಯ; ವಯಸ್ಸಾದ ವ್ಯಕ್ತಿ: ಕಳೆಯಲ್ಕಾಗದು ನರಪತಿಕುಳವನಱಿವ ಪೞವಾನಿಸನಂ (ಶಮದ. ೬೬ ಪ್ರಯೋ); ಎಳದು + ಪೆಱಿ, ಎಳವೆಱಿ, ಏವಂ ಬೆಳೆವೊಲಂ . . . ಪೞವಾನಿಸಂ (ಶಬ್ದಾನು. ೯೧ ಪ್ರಯೋ).

[ಪೞ$_1$(<ಪೞದು)+ಮಾನಿಸ$_1$(<ಮಾನುಸ)]

**ಪೞವಾವಿ** (ನಾ). ಹಳೆಯ ಬಾವಿ: ಮರ್ದುಗಳೆಲ್ಲಮನೊಂದು ಪೞವಾವಿಯೊಳ್ ಪೊಯ್ದು (ವಡ್ಡಾರಾ. ೭೦-೮); ಪೞವಾವಿಯ ನೀರಂತೆ ಕಣ್ಣೊಳಗಡಂಗಲುಂ (ಧರ್ಮಾಮೃ. ೬-೩೮); ಓಡಿ ಬಿರ್ದ ಪೞವಾವಿಯ ಮಧ್ಯದ ಕಾಸಮೂಲಮಂ ಕೊಟ್ಟನೆ ಪತ್ತಿ (ಧರ್ಮಪ. ೧-೭೯).

[ಪೞ$_1$(<ಪೞದು) + ಬಾವಿ]

**ಪೞವಾವಿಗೆ** (ನಾ). = ಪೞವಾವಿ: ನಿಡುಮರದ ತುದಿಗೋಡುಗಳೊಳ್ ಕಟ್ಟಿದ ತೃಣಪುಲೀಟಚ್ಚಂಗಳಿನಱಿಯಲಾದ ಕಾಡ ಪೞವಾವಿಗೆಗಳೊಳಂ (ಕಾದಂಉ. ೨೬೬). [ಪೞ$_1$(<ಪೞದು) + ಬಾವಿಗೆ]

**ಪೞವಿಗೆ** 'ಪೞಯಿಗೆ' ನೋ.

**ಪೞವೆ,** ಪಳವೆ, ಹಳವೆ (ನಾ). ೧. ಬಹುಕಾಲದ ಸಂಬಂಧ; ಹಳೆಯ ನಂಟು: ಪರಿಭವಕ್ಕಂ ಪೞವೆಗಂ ಪಾಗುಡಕ್ಕಂ ಪೞಬದ್ಧಕ್ಕಂ . . . ಮೋಕ್ಷಕ್ಕಂ ಮಹಾಸಮುದ್ರದೊಳ್ ಮಹಾನದಿಗಳ್ ಕೂಡುವಂತೆ (ಪಂಪಭಾ. ೯-೯೫ ವ); ದ್ವಾರದೊಳಿರ್ದ ಜನಾರ್ದನನ ಪೞವೆಯ ಕಳತೂರ್ಯಮಂಗಳಕಾರ್ಯದೊಳ್ ಕೂಸನಲಂಕರಿಸಲಟ್ಟದಂ (ನೇಮಿಪು. ೬-೧೩೬ ವ); ವಕಾರಕ್ಕೆ . . . ಪೞವೆ, ಎಳವೆ (ಶಮದ. ೨೨೧ ಪ್ರಯೋ). **ಪಳವೆ:** ೧. ಪಳವೆಯನೆಣಿಪಡೆ ಮುನ್ನಿನ ಪಳತ್ತನೊಳಗಾದ ಪಾಣ್ಡ್ಯನ್ರಿಪಸುತರೊಳ್ ತಾನೆಳಸಿ ಪಿಡಿದವನೆ ಭೂಪಂ (ಎಕ. XI, ದಾವಣ. ೮೪-೨೪; 1161). **ಹಳವೆ:** ೨. ಹಳೆಯತನ; ಹಳವೆಂ: ಮೌನಕಳಲುಂಟೆ? ತಾಳಿಮೆಗುಂಟೆ ಹಳವೆ? (೧೪ವಿಂ. ೩೦-೯೪); ಪ್ರಾಚೀನಕಾವ್ಯಗ್ರಂಥಗಳನ್ನು ಅವುಗಳ ಹಳವೆಯಿಂದ ಎತ್ತಿ ಹೊರತಂದು ತಿರುವಿ ಹಾಕಿದ . . . ಸಾಹಿತಿಯು (ಪಾಶ್ಚಾವಿ. ೪೬೦). 'ಪೞವೆಂ' ಪರಾ. [ಪೞ$_1$(<ಪೞದು)+-ವೆ]

**ಪೞವೇಟ** (ನಾ). ಹಳೆಯದಾದ ಪ್ರಣಯ: ಮಸೆವುದು ಮಾಸಲಿರ್ದ ಪೞವೇಟಮನಿಚ್ಚೆಯ ಬಿಚ್ಚತಿಕ್ಕೆಯುಂ ಪೊಸಯಿಪುದು (ಶಾಂತಿಪು. ೮-೯೧); ಪೊಸವೇಟದ ಪೞವೇಟದ ಸುಸಿಲಿನಿದಂ ಪಡೆದುದಳಿಗೆ ಬೆಳಗಪ್ಪಾಗಳ್ (ಅಜಿಪು. ೬-೬೫); ಮಕ್ಕಳ್ಗಾವಗವಿಾ ಬೇಟಮೆ ಸಾಲ್ಗುಮೆಂದು ಪೞ[ಪಾಠಾಂ. ಟಿ]ವೇಟಮಂ ಪೊಱಗೊಳ್ಕೆ ಪೆಡೆಗೆ ಹಾರಂ ಪೊಸವೇಟಮಂ ಪೊಯ್ದು ಕೊಳಲುಂ (ಅರ್ಧನೇ. ೫-೨ ವ).

[ಪೞ$_1$(<ಪೞದು)+ಬೇಟ$_1$(<ಬೇಂಟ)]

**ಪೞಸು,** ಪಳಸು, ಹಳಸು$_1$ (ಕ್ರಿ). ೧. ಹಳೆಯದಾಗು; ಹಳತಾಗು: "ಪೞಸೆಂದು ಜರಾಸಿತಾರ್ಥದೊಳ್" (ಕರ್ಣಾಸಿ. ೭೯). ೨. ಆಕರ್ಷಣೆಯನ್ನು ಕಳೆದುಕೊಳ್ಳು; ನೀರಸವಾಗು: ಇಂದಿನ ಚಂದ್ರಿಕೆ ಕಂದು ನಾರ್ತುದೋ ಗಾವರದಿಂಪದೇಂ ಪೞ[ಪಾಠಾಂ. ಬಳ]ಸಿತೋ (ಲೀಲಾವ. ೨-೯೪); ಬಾಯರ್ ಸವಿಗೆಟ್ಟ ಚುಂಬನಂ ಪೞಸಿದ ಮಚ್ಚುಮಗ್ಗಲಿಪ ನಾಣ್ಣುಡಿಯುಂ ಸತಿಗಾಗೆ (ಸೂಕ್ತಿಸು. ೮-೩೯೪); ನವವಿಧರತ್ನೋಪಚಾರದಿನೆಂದುಂ ಪೞಸದು ಬೇಟಂ (ಶಮದ. ೨೪೪ ಪ್ರಯೋ); ಪೊಲ್ಲವೆಣ್ ಮನೆಯೊಳೊರ್ಪಾಸಿನೊಳ್ ಕೂಡೆ, ನೀನೊಲ್ದ ತೋಳ್ತಟ್ಕೆಯದು ಪೞಸಿ ತಣ್ಣಗಾಗುವುದಲ್ತೆ ಬೇಗವರ್ (ಅಂತಿಗೊ. ೩೦-೬೧೧). **ಪಳಸು:** ೩. ಆಹಾರದ ಸ್ವರೂಪ ಹಾಗೂ ರುಚಿ ಕೆಡು; ಆಹಾರವು ಹುಳಿಯಾಗಿ ನಾರು: 'ಪಳಸುಗೂಳು' ಪರಾ. **ಹಳಸು$_1$:** ೧. ಮಾತು ಹಳಸದ ಮುನ್ನ ಕೈಗಳು ಸೋತು ಕೆಗೆದವೆ (ಕುಪ್ಪಾವಿ. ೮-೭೬); ಇಂದಿದ್ದದ್ದು ನಾಳೆಗೆ ಹಳಸುತ್ತದೆ. ಊರೂ ಸಮ; ತಿನ್ನುವ ಊಟವೂ ಸಮ (ಮೂಕಜ್ಜಿ. ೧೭೩); ಯಾವ ಹಳಸಿದ ತತ್ವಜ್ಞಾನವನ್ನು ರಾಯರು ಪ್ರಚಾರಪಡಿಸಿದವರಲ್ಲ (ಕಂಬಕು. ೧೨೧). ೩. ಕ್ಷಾಮದ ಕಾಲವು ಹೇಳುವುದಿಲ್ಲವು ಅನ್ನವು ಹಳಸಿಹುದೆಂದು (ಇಂಚಾಪ. ೨೨೫-೧೧); ಖಾನಿಯಲ್ಲಿ ಹಳಸಿದ ತಿಂಡಿ (ಚಂಡೆಮ. ೬-೧೪);

ನಾಯಿ ಹಸಿದಿತ್ತು, ಹಿಟ್ಟು ಹಳಸಿತ್ತು (ಗಾದೆ). ೪. ಹಾಳಾಗು; ಕೆಡು; ಹಸಗೆಡು: ಹಳಸಿದಗ್ಗಳಿಕೆಗಳ ವಿಲಾಸಲುಗಳೆದ ಬಿರುದಿನ . . . ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುವ್ಯಾಕ. ೧-೨೦); ಹಳಸಿದುದು ಯಜ್ಞಗಿಜ್ಞದ ಮಾತು (ಚಿಬಪು. ೩೧-೨೮); ನೆಲದೊಳೊರಗಿರ್ದವಳ ರವಣದ ಹಳಸಿದೊಡಲನು ತೋರಾ (ರಾಮಾಸಂ. ೬-೩-೧೬); ಚಾಲುಕ್ಯರ ಮನಸ್ಸು ಹಳಸುತ್ತಿದೆ ಎಂಬುದನ್ನು ಹೊಯ್ಸಳರಾಜ್ಯದ ಹಿರಿಯರೂ ಕಂಡುಕೊಂಡಿದ್ದರು (ಸಪತಿ. ೧೭೫).

[ಪೞಿ₁(<ಪೞಿದು)+-ಸು₂]

**ಪಟಹ**, ಪಳಹ₂, ಪಟಿಕ, ಪಟಿವ, ಬಟಿಪ (ನಾ). ೧. ಒಂದು ಬಗೆಯ ಚರ್ಮವಾದ್ಯ; ಪಟಹ: "ಪಟಹಂ ಪಟಹಾಭಿಧಾನದೊಳ್" (ಕರ್ಣಾನಿ. ೮೦), ಪಟಹದ ರುತಿ ಮೊೞಗಲ್ (ಚಂದ್ರಪ್ರ. ೧೨-೭೧); ಪ[ಟಗ]ನ ಕಯ್ಯ ಪಟಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫-೧೨ ವ). ೨. ಬೇಟೆಹಾಗೂ ಕಳ್ಳತನದ ಸಂದರ್ಭಗಳಲ್ಲಿ, ಗಾಳಿಯು ನುಗ್ಗದಂತೆ ಕನ್ನಗಳನ್ನು ಮುಚ್ಚಲು ಉಪಯೋಗಿಸುವ (ತಮಟೆಯಂತೆ ಅಗಲವಾಗಿರುವ) ಚರ್ಮದ ಒಂದು ಬಗೆಯ ಸಾಧನ ವಿಶೇಷ: "ಪಟಹಂ-ಬೇಂಟೆಯ ತೆರೆ; ವಾದ್ಯವಿಶೇಷಂ" (ಶಮದ. ಪರಿ. ೧); ಸೋಪಿನ ತೋಪಿನ ಪಟಹದ ಕೋಪಿನ ಪಾಳೆವದ ಗೋರಿವೇಂಟೆಗೆ . . . ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪); ವಿಳಸಿತಯೋಗಚೂರ್ಣತತಿ ಕರ್ಕಟರಜ್ಜು . . . ಪಟಹಮೆನಿಪ್ಪ ಪಾಯಶತಮಂ ತಳೆದು . . . ಕನ್ನಗತ್ತಿ ಸಹಿತಂ ಪೊಱಮಟ್ಟಂ (ದಶಕು. ೮-೯೩); ಕನ್ನದಿಂ ಗಾಳಿ ಬಾರದಂತೆ ಮುಚ್ಚುವ ಪಟಹಮಂ ಕನ್ನದೊಳ್ ಸಂದಿಸಿದ ಕಲ್ಲಂ ತೆಗೆವಿಕರ್ಪಟಂ ಮತ್ತಮನೇಕಚೌರ್ಯಸಾಧನಂಗಳಂ ಕೊಂಡು . . . ಎಟ್ಟಿರುತಿರ್ದಂ (ದಶಕು. ೮-೯೩ ವ). **ಪಳಹ₂**: ೧. ಉಲಿಯುತಿರ್ದಡೆ ಪಳಹಮೆಂತು ನಿರಪೇಕ್ಷೆಯಿಂ (ರತ್ನಕ. ೧-೪ ವ); ಪಳಹದ ಶಂಖದ ಕಹಳೆಯ ನಿನದಂ ಮೊಳಗುತ್ತಿರೆ ದಶದಿಸೆಯೊಳ್ (ವೃಷವಿ. ೫-೨೨ ರಗಳೆ); ಪೆರ್ಗಾಳೆಯ ಪಳಹದ ಕೊಟಿಲ ತಂಬಟೆಯ . . . ಭೂರಿನಿನಾದಂ ದೆಸೆ ಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೧). **ಪಟಿಕ**: ೧. ವಸುದೇವನೊರ್ವನಾ ಪಲಾಯಿಗನ ಕಯ್ಯ ಪಟಿಕ[ಪಾಠಾಂ. ಸಕಳಕ]ಮಂ ಕೊಂಡು . . . ಬಾಜಿಸುತ್ತಮಿರ್ಪಲ್ಲಿ (ಮಹಾನೇ. ೫-೩೪ ವ). **ಪಟಿವ**: ೧. "ಡಿಂಡಿಮಾಭಿಧಾನಂ ಪಟಿವಂ" (ವಸ್ತುಕೋ. ೭೯-೨೬); ಪಟಿವದ ತಿವಳಿಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಉಯುದಿಂಡೆಬಲದೆ ಕುಣಿದರ್ (ಅಜಿಪು. ೫-೩೨); ಕರಡೆಯ ತಾಳದ ಪಟಿವದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ (ಗದಾಯು. ೩-೪೯); ಕೊಟಿಲ ಪಟಿವದ ಪಲವುಂ ಗಿರುಗಟೆಯ ಸಿವುಱ ಸಿಪ್ಪಿನ ಕೊರಗಿನ ಕಿನ್ನರದ ಸರಮೆ ಸರಮಾ ಪೊಟಿಲೊಳ್ (ಸೂಕ್ತಿಸು. ೪-೧೦೪). **ಬಟಿಪ**: ೨. ಆ ಕಳ್ಳರ್ . . . ತನ್ನ ತಂದ ಪೊನ್ನ ಪುಡಿಕೆಯುಮನುಱಿಯುಮಂ ಬಟಿಪಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಪಂಚತಂ. ೨೩೨-೭). [<ಪ್ರಾ. ಪಡಹ./ಸಂ. ಪಟಹ./ತೆಲು. ಬಲಪ, ಬಲ್ಪ]

**ಪೞಿ₁**, ಪಳಿ₁, ಹಳಿ₁, ಹೞಿ₁ (ಕ್ರಿ). ೧. ದೂಷಿಸು; ನಿಂದಿಸು; ಬಯ್ಯು: "ಪೞಿ-ನಿಂದಾಯಾಂ, ವಸ್ತ್ರವಿಶೇಷೇ ಚ" (ಶಮಧಾ); ಪೞಿಗೆ ಮೇಣ್ ಪೊಗೞ್ಗೆ ಮೇಣ್ ನೆವಮಿಲ್ಲದೊಡಿಂತು ಕೈಗೞಿಯೆ ಬಗ್ಗಿಸುಗೆ (ಕವಿರಾ. ೧-೧೩೬); ಭೂತಳಂ ಪೞಿಯೆ ತೇಜಮೆ ಕೆಟ್ಟಪುದು (ಪಂಪಭಾ. ೯-೧೮); ಮುಳಿಗುಂ ಮುರಾರಿ ವಾಕ್ಪತಿ ಪೞಿಗುಂ (ಪಂಚತಂ. ೧೬೫-೬). ೨. ನಾಯಿಯನ್ನು ಅಟ್ಟು,-ಓಡಿಸು: "ಪೞಿಯೆನಲ್ ವರವಸ್ತ್ರದಲ್ಲಿ . . . ಕುನ್ನಿಯಂ ಪೊಱವಡಿಪ ನುಡಿಯೊಳಂ ವರ್ತಿಸಿರ್ಕುಂ" (ಸಂಜೀವ. ೧೮). ೩. (ಅಲಂ) ಮೀಱು; ಅತಿಶಯಿಸು: ವಿಭೂಷಣಕಾಂತಿ ಸುರೇಂದ್ರಚಾಪಮಂ ಪೞಿಯೆ (ಚಂದ್ರಪ್ರ. ೧೦-೨೬); ಕಾಂಚನಕುಂಭಮಂ ಪೞಿವ ಪೆರ್ಮೊಲೆಯಂ ನಸುದೋಱುತುಂ (ಉದ್ಭಟ. ೧೦-೬೮); ಸುೞಿಯಂ ಪೞಿದೊಪ್ಪುವ ಪೊರ್ಕುಳಿಂದೆ . . . ಒಪ್ಪುವಳ್ (ಕಬ್ಬಿಗ. ೧೨೧). **ಪಳಿ₁**: ೧. ತನಗೆ ಕವಿತ್ವಮಿಲ್ಲ ಪೆಱರಂ ಪಳಿ[ಪಾಠಾಂ. ಜಱೆ]ದಲ್ಲದೆ ನಿಲ್ಲನಾತನೊಳ್ ಮುನಿವುದನೀತಿ (ಗಿರಿಕ. ೧-೨೯); ಬಡವರಾದವರನು ಪ[ಪಾಠಾಂ. ಹ]ಳಿಯದಿರೆಚ್ಚಱಕೆ (ಪುರಂದ. ಧಾ. ೫-೯೭-೪); ಪರಿಚಾರಮೆಂದು ಪಳಿಯದೆ ಪಿರಿದು ಕಿಱಿದುಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಹದಿಬ. ೩-೩೩); ಪಳಿವುದು ಲೋಕಂ ತಂದೆಯ ನಿಳಯದೆ ಪತಿಯುಳ್ಳ ಸತಿಯುಮಿರೆ (ಶಾಕುಂತ. ೬೬-೧೧೭). ೩. ಪಂಚಶರಮಂ ಪಳಿವ ಸುಣ್ಬರಲ್ (ಕಾರಿರ. ದೇ. ೨೮೯-೧೭); ಮುಖಂ ಮುಕುರದಿರವಂ ಪಳಿದುದು (ಚಿಬಪು. ೫-೪೪); ಮಾದಳಿರ ಪಳಿವ ಚೆಂದುಟಿಯ ಸವಿಗೆ . . . ಬಯಸಿ (ಜೈಮಿಭಾ. ೩-೧೦); ಪಂಚಬಾಣನ ಚೆಲ್ವ ಪಳಿವ ಜಯಂತನನಂಚೆಗಮನೆಯಱಿಸಿದಳು (ಕಂಸವಿ. ೯-೧೯೯). **ಹಳಿ₁**: ೧. ಕಳಬೇಡ ಕೊಲಬೇಡ . . . ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ ಇದೆ ಅಂತರಂಗಶುದ್ಧಿ ಇದೆ ಬಹಿರಂಗಶುದ್ಧಿ (ಬಸವ. ೨೩೫); ರೋಗಿ ಹಳಿದೊಡೆ ಹಾಲು ಹುಳಿಯಪ್ಪುದೆ (ಹಚಕಾ. ೧-೨೭); ಆವ ಹಿರಿಯರ ಹಳಿದೆನೋ ಮುನ್ನಾವ ಧರ್ಮವ ತುಳಿದೆನೋ (ಕೌತರಾ. ೩೦-೪೩); ಸ್ಥಲವೊಂದು ನಿನಗಿಹುದು ವಿಶ್ವವೃಕ್ಷದೊಳಂತು ಹಳಿಯದಿರು ನಿನ್ನಿರವ (ಮಂಕುಕ. ೫೬೨). ೩. ಇಳೆಗೆ ನಳಕೂಬರ ಜಯಂತರ ಚೆಲುವ ಮದನನ ರೂಪರೇಖೆಯ ಹಳಿವುದಾ ನಳನೃಪನ ನಿಜಸೌಂದರಿಯ ಲೋಕದಲಿ (ನಳಚ. ೨-೩೬). **ಹೞಿ₁**: ೧. 'ಹೞಿಸು' ಪರಾ.

[ದೇ.॥ ತಮಿ. ಮಲ. ಪೞಿ; ಕೊಡ. ಪಳಿ]

**ಪೞಿ₂**, ಪಳಿ₂, ಪಳಿವು, ಪೞಿವು, ಹಳಿ₃, ಹಳಿವು₁, ಹೞಿವು (ನಾ). ೧. ಅನ್ಯಾಯವಾದ ಆರೋಪ; ನಿಂದೆ: "ತೆಗೞ್, ಪೞಿ . . . ಅಣಕಂ-ಈ ೬ ನಿಂದೆ" (ಕಶಸಾ. ೫೭-೨೫೬); ತನ್ನ ಮುಂ ಗೆಯ್ದ ಪಾಪಮುಮಯಶಮುಂ ಪೞಿಯುಂ ಪೊಲ್ಲಮೆಯುಮಂ ನೀಗಿದಂ (ವಡ್ಡಾರಾ. ೧೬೭-೨೬); ಲೋಕದ ಪೞಿ ಪೊರ್ದದೆ ಮಾಣ್ಗೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪-೧೦೨); ಚಿತ್ರಭ್ರಾಂತಿಯುಮಂ ಹಳಿಯ ಪೞಿಯುಮಂ ಪಿಂಗಿಸಿದರ್ (ಪಂರಾಮಾ. ೧೬-೫೬). ೨. ನಾಯಿಯನ್ನು ಅಟ್ಟುವುದು,-ಓಡಿಸುವುದು: "ಪೞಿ=ವಸ್ತ್ರವಿಶೇಷಂ; ದೂಷಣಂ; ನಾಯ ಸೋವುವುದು; ಲೋಹದ ಘಟ್ಟ" (ಶಮದ. ಪರಿ. ೧); ಅಂತು ಪರಿದು ನೆರೆದ ರಾಜನ್ಯಕಮಂ ಪೞಿ[ಪಾಠಾಂ. ಳ್ವಿ]ಯಂತೆ ಪಲಾಯನಶೀಲಮಪ್ಪಾಡಿ ಹೇಮಪ್ರಭನಂ ಮುಟ್ಟೆವಂದು (ಪಂರಾಮಾ. ೩-೫೮ ವ). **ಪಳಿ₂**: ೧. ಅಳಿಪಿಲ್ಲದೆ ನೆಗೞ್ದರೆಯುದ್ಧವಸ್ಸುರಪುರಮಂ ಪಳಿಗಳ್ಕದಳಿವ ಪಾತಕರಿಳಿವರ್ಗ್ಗಳಗಳನೆ ನರಕಗತಿಗೆ (ಸೌಇಇ. XX, ೪೭-೩೯; 1074); ಗೋವಳತಿ ಗೋಪಿಯ ನಂದನ ಕಂದನಾದನೆಂಬಾ ಪಳಿಯೆಲ್ಲಮಂ ಕಳೆಯಲ್ (ಕೊಲ್ಹಾಶಾ. ೯-೩೮; 1147); ಪಳಿವಾಂತ ಲವಣಾಬ್ಧಿಸಂಜಾತವಿದ್ರುಮವನಿಳಿಸಿ (ನಂದಿಮಾ. ೮-೩೬); ನಮ್ಮಯ ಕುಲದ ಯಶಶ್ಚಂದ್ರಿಕೆಯ ಪಾಳ್ಗೆಯ್ದು, ಪಳಿಯ ಕರ್ದಿಂಗಳಂ ಮೆತ್ತಿ (ಚಿತ್ರಾಂಗ. ೫೯-೧೬೩೪). **ಪಳಿವು**: ೧. ಕಳವು ಪುಸಿ ಹಾದರ . . . ಪಳಿವು ವಂಚನೆ ಜಾತಿಸಂಕರ ಕೊಲೆ ವಿರೋಧವು ವಿಕೃತವಮಾಯಾವಳಿಗಳೆಂಬಿವು ನಿನ್ನೊಳಿಲ್ಲಲೆ ರಾಯ (ಕುವ್ಯಾಸ. ೧-೪೫); ಕಾರ್ಪಣ್ಯಮಳಿವು ಪಳಿವನ್ಯಾಯ . . . ಕರ್ಕಶಂಗಳಿವು ಮೊಳೆದೋಱವು (ಜೈಮಿಭಾ. ೨-೫); ಪುರಜನರ ಬಿಱುನುಡಿಗೆ ತಡೆದೆ ಜಾತಿರಾಜರ ಪಳಿವನೊಳಕೊಂಡೆ (ಶ್ರೀರಾಮ. ೩-೫೦); ಪಳಿವಾಯಿತು ಕ್ಷತ್ರಿಯ ಕುಲಕೆ

(ಕೂಗಿಲೆ. ೧೯–೧೦). ೩. ನಿಂದೆಗೆ ಗುರಿಯಾಗುವಂತಹುದು ; ಹೀಯಾಳಿಕೆಗೆ ಪಾತ್ರವಾಗುವಂತಹುದು : ನಿನ್ನ ನಿತಂಬಕ್ಕೆ ಪುಳಿನ ಸ್ಥಳಂ ಪಳಿವು ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ನಂಬಿರ. ೧೪–೧೮). **ಪಟುವು :** ೧. "ಪಟುವೆಂದೆನೆ ನಿಂದೆ" (ಚತುತಿ. ೪೬) ; ಪಟುವನ್ಯಾಯವ ನೋಡದನ್ಯರೊಳೆ ದೂಱುಟ್ಟಿಲ್ಲರಂ ಬಾಧಿಪಾ ತಳವಾಱಂ ಬೆಳವಾರನ್ನೆ (ಸೋಮೇಶ. ೬೬) ; ಕಳವು ಪಿಸುಣ್ ಪಸವು ಬಱಂ ಪಟುವಟು ವಲಸೊಲಸು ಕುತ್ತುವಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). **ಹಳಿ**$_3$ **:** ೧. ಹಳನೇಹವಿಹುದೆಂದು ಎಳಸಿ ಹೋಗುವನೆಗ್ಗ ಕಳವಳ ವಕ್ಕು ಹಳಿಯಕ್ಕು (ಸರ್ವಜ್ಞ. ೧೮೦೭) ; ಕಳ್ಳನೆಂಬ ಹಳಿ ಮೆರಸಲೇಂ ನೀ ಕಳ್ಳರ ನಡು ತೂಗಾಡಿದೆಯಾ ? (೧೪ವಿಂ. ೪೧–೯) ; ಅಯ್ಯೋ ನಿಮಗೆ ಇಂಥ ಹಳಿ ತರೋದು ನನ್ನ ಹಣೇಲಿ ಬರೆದಿತ್ತಲ್ಲ (ಚಿಕಂ. ೨೧೧). **ಹಳಿವು**$_1$ **:** ೧. ಹಳಿವು ಹೊಱಿದ ತಿಳಿವಿನಲ್ಲಿ ಕಳೆ ಕಣ್ದೆಱೆದು ಉಳಿದ ನಿಜದ ಶೇಷ ಶ್ರೀಗುಹೇಶ್ವರ ನಿಮ್ಮ ಬಸವಣ್ಣ (ಅಪಹಂ. ೨೯೨–೧೩೦೫); ರಕ್ಷಿಪನ ಹಳಿವಂ ಕೇಳಲೆನಗೆಂತು ಸೈರಿಸಲಪ್ಪುದೇ (ಇಱಿತ. ಚೇ. ೧೦೭–೭) ; ಭ್ರಮಿಯಿವನು ನೆಱೆ ಹಳಿವ ತಹನೀ ಶ್ರೋತ್ರಿಯರ ಕುಲಕೆ (ಸಂಭಪ. ೩೧–೧೪) ; ನಿಮ್ಮಯ ನುಡಿಗೆ ಹೊದ್ದದು ಹಳಿವು (ತೊರಂ. ೧–೯–೨೬). ೪. ತೊಂದರೆ ; ಕೇಡು ; ವಿಪತ್ತು : ಪಲವು ದೇಶಗಳೆಲ್ಲ ದುರ್ಭಿಕ್ಷದಿಂದಳಿಯೆ ಹಳಿವಿಲ್ಲದಿರ್ದುದಾ ಗೌತಮಾಶ್ರಮದಲ್ಲಿ ಮುನಿತಪಸ್ತೇಜದಿಂದ (ಲಕಿಚಿಂ. ೨೪–೩). **ಹಟುವು :** ೧. "ನಿಃಪಮ ದುಷ್ಪಮ ಗರ್ಹ್ಯ ಎಂಬಿವು ಹಟುವಿನೊಳ್ ಅಪ್ಪುವು" (ನಾಚಿಂ. ೬).

[< ಪಟು$_1$./ತಮಿ. ಮಲ. ಪಟು]

**ಪಟು**$_3$**,** ಹಳಿ$_4$, ಹಟು$_2$ (ನಾ). ೧. ಲೋಹದ ಪಟ್ಟಿ ಅಥವಾ ಕಂಬಿ : "ಪಟು = ವಸ್ತ್ರವಿಶೇಷಂ ; ದೂಷಣಂ ; ನಾಯ ಸೋವುವುದು ; ಲೋಹದ ಘಟ್ಟ" (ಶಮದ. ಪರಿ. ೧) ; "ಪಟುಯೆನಲ್ ವರವಸ್ತ್ರದಲ್ಲಿ ದೂಷಣದಲ್ಲಿ ಲೋಹಮಂ ಕರಗಿಸಿದ ಘಟ್ಟಿಯೊಳ್ ಕುನ್ನಿಯಂ ಪೊಱವಡಿಪ ನುಡಿಯೊಳು ವರ್ತಿಸಿರ್ಕುಂ" (ಸಂಜೀವ. ೧೮). **ಹಳಿ**$_4$ **:** ೧. ಕಾದ ಲೋಹದ ಹಳಿಯವೊಲು ಕೆಂಪಾದವಸುರರ ಮೋಱೆಗಳು (ಕುವ್ಯಾಕ. ೭–೨೮) ; ಹೊಳಕಿದುದು ಕಿರಣಾಳಿ ಹೇಮದ ಹಳಿಗಳಲಿ . . . ಮಣಿ ಹರ್ಮ್ಯಾದಿ ಹಂತಿಗಳ ಸೊಗಸಿನಲಿ (ತೊರಂ. ೫–೨–೨೪). ೨. ಉಗಿ ಬಂಡಿಯ ಸರಳು ; ರೈಲುಕಂಬಿ : ಯಾರೋ ಹಳಿ ಕಿತ್ತುತ್ತಾರೆ. ಡಬ್ಬಿ ಉರುಳಿಸುತ್ತಾರೆ (ಹಾಸುಹೊ. ೨೮) ; ಹಳಿಯ ಮೇಲೋಡುತಲಿದೆ ರೈಲು (ಚಂದ್ರವೀ. ೧೦೫–೧೮). ೩. ಬಂಡಿಯ ಗಾಲಿಯ ಕಬ್ಬಿಣದ ಪಟ್ಟಿ,–ಪಟ್ಟೆ : ಕಮ್ಮಾರರು ಗಾಲಿಗೆ ಹಳಿಯನ್ನು ಬಿಗಿಯುವಾಗ (ಮುಂಬಯಿ. ೫–೧೧೫) : ಒಂದರ ಹಳಿ ಬಿಟ್ಟದ್ದರೆ ಮತ್ತೊಂದರ ಅಚ್ಚು ಮಣಿದು ಹೋಗಿದೆ (ಜೆಳಭಾ. ೧೬೬) ; ಹಳಿ ಕಟ್ಟಲು ತಂದಿಟ್ಟದ್ದ ಒಂದು ಗಾಡಿಚಕ್ರಕ್ಕೆ ಡಿಕ್ಕಿ ಹೊಡೆದು, ಅದನ್ನು ಮೈ ಮೇಲೆ ಬೀಳಿಸಿ ಕೊಂಡಿದ್ದನು (ಮಲೆಮ. ೨೮೮). ೪. ಹಳಕು ; ಚೂರು ; ಹರಳು: ಪಚ್ಚೆಗರ್ಪುರದ ಹಳಿಯನೊಡದಾ ಧೂಳಿಯಂ ಹರಹಿ (ಪದ್ಮರಾ. ೮–೯೨) ; ವಾಟಿಯೊಳಗೆಯುಪ್ಪಿನ ಹಳಿಯ ತಡಹಿಕೊಂಡು ಗೊಂದಣದ ಸಂಭಾರಮಂ ಮೆತ್ತಿ . . . ಮಡಕೆಯೊಳಿರಿಸಲದು ತುಂಬುವಾಳೆಗಾಯ್ಸೆಸರಾದವು (ಸೂಪಶಾ. ೪–೭೪). ೫. ಮೊಸರು ಮೊದಲಾದುವುಗಳ ಗಡ್ಡೆ,– ಗರಣೆ ; ಧೈಂಡಿ : ನೆನ್ನೆ ಅವರ ಮನೆಯಲ್ಲಿ ಬಡಿಸಿದ ಹಳಿ ಮೊಸರು ಸೊಗಸಾಗಿತ್ತು (ರೂಢಿ). **ಹಟು**$_2$ **:** ೧. ಮೇರುವಿನ ಹಟುಗಳೇಂ ಭಂಡಾರಕ್ಕೆನ್ನಾಣೆ ವಜ್ರಧಾರೆಗಳೆಂಟೆಂಕಾರಿಸಿ ಸಲಿಸದೊಡೆಂದು ಬಲಾರಿಗೆ ದಿವಿಜಾರಿ ರಾಯಸಂ ಬರೆಯಿಸುವಂ (ಅನಂಪು. ೧೩–೮) ; ಕಾಯ್ದು ಕರ್ಬೊನ್ನ ಹಟುಗಳಿಂದೇರ್ವರಿಯನಮರ್ಚುವುದುಂ (ಶಾಂತೀಶ್ವ. ೯–೧೧೦ ವ). ೪. ಆಕುಂಚಿತವಾದ ವಾಮಪಾದಾಂಗುಷ್ಠದೊಳ್ ಕೊಡರ್ದ ಪಾದುಕದ ಪಲ್ಲೆಯಂ ಪದ್ಮರಾಗದ ಹಟುಯೊಳುಟಿಪಿ ತ್ರಿಭಂಗಿ ಸಂಗಳಿಸೆ ನಿಂದು (ಮಹಾನೇ. ೧೪–೬೨ ವ). 'ಘಳಿ$_2$' ಪರಾ.

**ಹಳಿಹಳಿ** (ದ್ವಿರುಕ್ತಿ) : ಪಳಿಹಳಿಯೇಳ್ವ ಮುಗಿಲ ಹೊರೆಯೊಳು ಕೂಡುವೆಳೆವಾಂಬಟ್ಟೆಗಾದರಲ ಲಲಿತಾಂಗಸೌರಭ್ಯವ ತಲೆವೊಱೆವೊತ್ತು ಸುಳಿವ ಗಾಳಿಗೆ ಮೈಯನಿತ್ತ (ಶ್ರೀಪಾಲ. ೪–೬೬) ; ನನ್ನ ತಟ್ಟೆಗೆ ಹಳಿಹಳಿಯಾದ ಮೊಸರನ್ನು ಹಾಕಿದರು (ಚೆಂಗಾಳ್ವ. ೫೪).

**ಪಟು**$_4$**,** ಪಳಿ$_3$, ಪಟು$_3$(ನಾ). ೧. ಕಸ ; ಕೊಳೆ ; "ಕಳೆ" (ಚತುನಿ. ೬. I, ೬೦). **ಪಳಿ**$_3$ **:** ೨. ಪೈರು ಕಟಾವಾದ ಮೇಲೆ ಉಳಿಯುವ ಕೂಳೆ : ನಟ್ಟು ಕಡಿಸಿ ಹಸನ ಮಾಡಿದರೂ ಅಜಮಾಸು ಇಷ್ಟೇ ಹಣ ವೆಚ್ಚವಾಗುತ್ತದೆ. ಪಳೀ ಆರಿಸುವುದು ಬೇರೆ (ಕಭಾಗ. ೨೬೭). **ಪಟು**$_3$ **:** ೧. "ಬಿಂಜದೊಳ್ ಕಸದೊಳಂ ಪಟು" (ಶಬ್ದಮಂ. ೧೧೩).

**ಪಟು**$_5$**,** ಪಡಿ$_4$, ಪಳಿ$_4$ (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ : "ತೆಗಟು ವಾಸ ಪಟುಯೆನಿಕು" (ಶಬ್ದಮಂ. ೧೧೬) ; ಅರ್ಧ ಗಪ್ಪಡಮಂ ಬಿಸುಟ್ಟು ಪಟುಯಂ ಸಯ್ಯುಟ್ಟುಕೊಂಡಿರಿಂ (ಪಡ್ಮಾರಾ. ೯೩–೧೬) ; ಪಟು ಚಿತ್ರಾವಟು ಜೋಗಂ ಪಟುಯಂ ದೇವಾಂಗಮೆಂಬ ವಸನಂಗಳನೇಂ ಗಟುಯಿಸುವವೊ ಮಡಿವಳ್ಳನ ಪಟುಯತನನೆ ಪೋಲ್ತು ವಿಶದವಸನಾಂಗಳುಱಂ (ಅದಿಪು. ೫–೩೪) ; ಚೀನದ ತಳಿರ್ವಟ್ಟೆಯ ಪಟು ಯ ವಟುಯ ದೂಸಿಗವಸರಂ (ಲೀಲಾವ. ೭–೧೯). **ಪಡಿ**$_4$ **:** "ಪಳಿ (ಪಡಿ) – ಪಟೀ = ಬಟ್ಟೆ" (ತದ್ಭಕೋ. ೨೫). **ಪಳಿ**$_4$ **:** ಚಿತ್ರದಣ್ಣಂ ಪಳಿಯೆಸೆವ ಝಳಂಬಂ ಗಜೇನ್ದ್ರಂ ತುರಂಗಂ (ಎಇ. XIII, ೩೩೦–೧೩; 929) ; ಅಯ್ನೂರ್ವ್ವರು ಬಿಟ್ಟ ಧರ್ಮಮೆಂತೆನೆ ಆನೆ ಮಾಣಿಕ ಪಳಿ ಪತ್ತಾವಳಿ ಅಡಕೆ ಮೆಳಸು (ಕಇ. V, ೩೩–೫೩ ; 1176) ; ಪಳಿಯ ನುಟ್ಟನು ಮಲ್ಲಗಂಟನಲಿ (ಕುವ್ಯಾವಿ. ೩–೬೯) ; ಮಲಯಜದಣ್ಪು ಪೊಂದೊಡಿಗೆ ಪಟ್ಟೆಯ ಪಟ್ಟೆ ಪಳಿಯ ಚಲ್ಲಣ (ಕುಂಾಸಾಂ. ೧೧–೩೭).

[< ಸಂ. ಘಲಿ]

**ಪಟು**$_6$ 'ಪಡಿ$_3$' ನೋ.

**ಪಟುಕಯ್** 'ಪಟುಕೆಯ್' ನೋ.

**ಪಟುಕೆಯ್,** ಪಳಿಕೆಯ್, ಪಟುಕಯ್ (ಕ್ರಿ). ೧. ದೂಷಣೆ ಮಾಡು ; ಹೀಯಾಳಿಸು ; ನಿಂದಿಸು : ಪಟುಕೆಯ್ದು ತೊಟ್ಟನುಟು ದಂತುಟುದ ಮಹಾಪುರುಷರಱುಯದುಟುದರೆ ಸಿರಿಯಂ (ಕವಿರಾ. ೩–೭೬೫) ; ಪಟುಕೆಯ್ಯು ಬಂದು ನಲ್ಲಳ ಮುಳಿಸನೊಳಕೊಂಡು (ಆದಿಪು. ೧೨–೨೯ ವ) ; ಶಿಶುಪ್ರಕರಮನೇನಗಲ್ಚಿದೆನೊ ಧರ್ಮಮನೇಂ ಪಟುಕೆಯ್ದೆನೋ (ಸುಕುಮಾ. ೯–೧೦೨) ; ಚೋಳನಂ ಪಟುಕೆಯ್ದು ಮಾಳವನನಿಟುಕೆಯ್ದು ಲಾಳನಂ ಜಱೋಡಾಡಿ (ಜಗವಿ. ೧೭–೧೧೮ ರಗಳೆ). ೨. ಕೆಟ್ಟ ಕೆಲಸವನ್ನು ಮಾಡು ; ತಪ್ಪು ಮಾಡು : ಇಂ ವಿಷಯ ಸುಖಕ್ಕೆಱಗೆಂ ಪಟುಕೆಯ್ದು ತೊಟ್ಟನುಟುವಂತುಟುವೆಂ (ಅಜಿಪು. ೨–೮೨); ಅಳಿಪಿ ಪಟುಕೆಯ್ವವನಂ ಬೀಸಿ ಬಿದಿರ್ದಿಕ್ಕಿ ಕಳೆವುದು (ಲೀಲಾವ. ೧೪–೪೪). **ಪಳಿಕೆಯ್ :** ೧. ಪಳಿಕೆಯ್ವಂ[ಪಾಠಾಂ. ಕೈವಂ] ಖಳನೆಂದಾಂ ಮುಳಿಯೆಂ (ಶಬಶಂ. ೧–೧೯). ೩. (ಅಲಂ) ಅತಿಶಯಿಸು ; ಮೀರು : ಸರಸಿಯಂ ಪಳಿಕೆಯ್ವ ನಾಭಿಮಂಡಲವಲ್ಲಿ (ಕಾದಿರ. ಚೇ. ೨೮೯–೧೩). **ಪಟುಕಯ್ :** ೧. ವಿತ್ತೇಶನೇನಿತ್ತೊಡಂ ಪಟು ಕಯ್ವರ್ ವರುಣಂ ಕರಂ ಕರುಣದಿಂ ಲಲ್ಲೈಸೆ ತಾಪೊಲ್ಲರ್ (ಸೂಕ್ತಿಸು. ೪–೧೩೧).

[ಪಟು$_2$ + ಕೆಯ್$_1$]

**ಪಟುಗಟು** (ಕ್ರಿ) ದೋಷರಹಿತವಾಗು ; ನಿಂದೆಯಿಲ್ಲದಿರು :

ಅಹಮಿಂದ್ರರ್ . . . ಪಾಪಹರಂಗೆಱಗುವರೆನಿಸಿದ ಮಹಿಮೆಯ ಪೞಿಗೞಿದ ಪರಮಕೋಟಿಯೊಳಿರ್ಪರ್ (ಶಾಂತಿಪು. ೯-೧೨೪).

[ಪೞಿ₂ + ಕೞಿ₁]

**ಪೞಿಗಾಳೆಗ** (ನಾ). ಪ್ರತಿಯಾದ ಯುದ್ಧ,—ಕಾಳಗ: ಅೞಿಮರುಳಾದಂತಾ ಲತೆಯೊಳ್ ಪೞಿ[ಪಾಠಾಂ. ೞು]ಗಾಳೆಗಂಗಾದಿ ಬರೆವರೆ (ಪಂಪಭಾ. ೫-೧೨ ವ). [ಪೞಿ₆(<ಪಡಿ₃) + ಕಾಳೆಗ]

**ಪೞಿನುಡಿ₁** (ಕ್ರಿ). ನಿಂದೆಯ ಮಾತನ್ನಾಡು; ಅಪವಾದವನ್ನು ಹೊರಿಸು; ದೂಷಿಸು: 'ಪೞಿನುಡಿಹ' ಪರಾ.

[ಪೞೂ₂ + ನುಡಿ₁]

**ಪೞಿನುಡಿ₂**, ಪಳಿನುಡಿ (ನಾ). ನಿಂದೆಯ ಮಾತು; ಅಪವಾದ; ದೂಷಣೆ: ವಿಜ್ಞಾನವಿಕಲಂ ಪಶುಪ್ರಾಯಂ ಎಂಬುದು ಮೊದಲಾಗೆ ಪೞಿನುಡಿಯಂ ಸೈರಿಸುವನುಂ (ತತ್ತ್ವಪ್ರ. ೩೩೬). **ಪಳಿನುಡಿ**: ನೀವೆಲ್ಲ ಪಳಿನುಡಿಯಾ ಬಳಿಯುಲೆಂದೇ ಕೇಳಿಗೊಂಡಿರಾ ಹೇಳಿ? (ನಡದಾ. I, ೪೫೮). [ಪೞಿ₂ + ನುಡಿ₂]

**ಪೞಿನುಡಿಹ** (ನಾ). ದೂಷಣೆಯ ಮಾತನ್ನಾಡುವಿಕೆ; ನಿಂದಿಸುವಿಕೆ: "ಅವರ್ಣವಾದಃ, ಪೞಿನುಡಿಹ" (ತಸೂವ್ಯ. ೨೧೪).

[ಪೞಿನುಡಿ₁ + -ಹ₂(<-ಪ₂)]

**ಪೞಿಯತ** 'ಪೞಿಹತ್ತ' ನೋ.

**ಪೞಿಯತ್ತ** 'ಪೞಿಹತ್ತ' ನೋ.

**ಪೞಿಯಱ** 'ಪಡಿಯರ' ನೋ.

**ಪೞಿವಾವುಗೆ** (ನಾ)– ಮಂಚವನ್ನು ಇಡಲು ಮಾಡಿದ ಎತ್ತರದ ಪೀಠ,–ವೇದಿಕೆ: "ಪೞಿವಾವುಗೆಯೆ ವಲಂ ಪ್ರತಿಪಾದುಕಂ" (ಸಂಜೀವ. ೧೯); ಪಳಿಕಿನ ಪೞಿವಾವುಗೆಯಿಂ . . . ರಂಜಿಪ ರನ್ನದ ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದಳ್ (ಪಂರಾಮಾ. ೩-೬೫); ನಿಶ್ಶ್ರೇಯಸಶ್ರೀಯ ಸಿರಿಮಂಚದ ಕೆಟಗೆ ಪೋಲ್ವ ಪೞಿವಾವುಗೆಯಂತೆ ಪಳಚ್ಚನಾದಚ್ಛವಳುಕಿನ ಸಮಾಧಿಶಿಲಾಪಟ್ಟಕಮುಂ (ಅನಂಪು. ೧೪-೬೮ ವ); ಶಕಾರಕ್ಕೆ . . . ಪ್ರತಿಪಾದುಕಂ—ಪೞಿವಾವುಗೆ (ಶಮದ. ೨೧ ಪ್ರಯೋ). [<ಸಂ. ಪ್ರತಿಪಾದುಕಂ]

**ಪೞಿವು** 'ಪೞಿ₂' ನೋ.

**ಪೞಿವೊಂದು** (ಕ್ರಿ). ಅಪವಾದವನ್ನು ಹೊಂದು; ನಿಂದೆಗೊಳಗಾಗು: ಪೆತ್ತರ್ ಪೞಿವೊಂದದವೊಲಿತ್ತೆಡೆಯೊಳಡಂಗಿ ಬಾೞ್ವುದುತ್ತಮವಲ್ತೇ (ಚಿಕವಿ. ೬-೨೮೫). [ಪೞಿ₂ + ಪೊಂದು₁(<ಪೊರ್ದು)]

**ಪೞಿಹತ** (ನಾ). ತಡೆ; ವಿಘ್ನ: "ಪೞಿಹತ ಪ್ರತಿಹತಮುದಕ್ಕು" (ಕವಿಕಂ. ೨೪೩). [<ಸಂ. ಪ್ರತಿಹತ]

**ಪೞಿಹತ್ತ**, ಪಳಿಹತ, ಪಳಿಹತ್ತ, ಪೞಿಯತ, ಪೞಿಯತ್ತ, ಫಳಿಹತ (ನಾ). ೧. ಒಬ್ಬನಿಗೆ ಬದಲಾಗಿ ಬರುವವನು; ಪ್ರತಿನಿಧಿ: ಶಕಾರಕ್ಕೆ—ಪ್ರತಿಹಸ್ತಂ-ಪೞಿಹತ್ತಂ; ಪ್ರತಿಪಾದುಕಂ–ಪೞಿವಾವುಗೆ (ಶಮದ. ೨೧ ಪ್ರಯೋ). **ಪಳಿಹತ**: ಅವರ ಪಳಿಹತರು ಕೋಣವತ್ತಿಯ ಟಣಾಂತರದ ಪೆರ್ಗ್ಗಡೆಗಳು (ಕಇ. IV, ೨೨-೩೫; 1024); ವ(ಧ)ರ್ಮ್ಮಕಾರ್ಯೋದ್ದೇಶದಿಂ ತನ್ನ ಪಳಿಹತಂ ಸಿಂಗರಸನಂ ಕರೆದು (ಎಇ. XVIII, ೧೯೧-೬; 1104); ಮೊದಲ ಪತ್ಥಳಿಯ ಪಳಿಹತ ಮಹಾದೇವಣ್ಣನು (ಎಇ. XIII, ೩೨೨-೫೫; 1126) ೨. ಪ್ರತಿನಿಧಿಗೆ ಸಲ್ಲುವ ಸುಂಕ: ಶ್ರೀಕರಣಗಳು ಪಳಿಹತವಂ ಬಿಟ್ಟಿವಾಗಿ ಪ್ರತಿವರ್ಷಂ ಸಲ್ವಂತಾಗಿ ಬಿಟ್ಟ ಸ್ತಿತಿ (ಮೈಆರಿ. ೧೯೪೦, ೧-೬೫; ಸು. 1300). **ಪಳಿಹತ್ತ**: ೧. "ಪಳಿಹತ್ತ (ಪ್ರತಿಹತ್ತ)-ಪ್ರತಿಹಸ್ತ=ಪ್ರತಿನಿಧಿ" (ಕದ್ಬಕೋ. ೨೫); ಅವನನ್ನು ತನ್ನ ಪಳಿಹತ್ತ ಮಾಡಿ (ಮಂತ್ರಿಶ. ೧೨-೮). **ಪೞಿಯತ**: ೧. ಪೞಿ . . . ದೇವಾಂಗಮೆಂಬ ವಸನಂಗಳನೇಂ ಗೞಿಯಿಸುವವೊ ಮಡಿವಳ್ಳನ ಪೞಿಯತನನೆ ಪೋಲ್ತು ವಿಶದವಸನಾಂಗಳುಜಂ (ಆದಿಪು. ೫-೩೪). **ಪೞಿಯತ್ತ**: ೧. "ಪೞಿಯತ್ತ[ಪಾಠಾಂ. ಪೞಿಹತ್ತ]ಮೆಂದು ಪ್ರತಿಹಸ್ತಂ" (ಕಶಸಾ. ೬೩-೬೫೬). **ಫಳಿಹತ**: ೧. ಅವರ ಫಳಿಹತ ಪಾಕಣ್ಣನು (ಎಕ. XI, ದಾವಣ. ೧೪೧-೩೧; 1065). [<ಸಂ. ಪ್ರತಿಹಸ್ತ]

**ಪೞು₁** 'ಪೞುವ' ನೋ.

**ಪೞು₂** (ನಾ). ಮಿತಿ; ಮೇರೆ; ಎಲ್ಲೆ: 'ಪೞುಗೞಿ' ಪರಾ.

[ದೇ.॥ ತಮಿ. ಪೞು = ಚೌಕಟ್ಟು]

**ಪೞು₃** 'ಪೞಿ₄' ನೋ.

**ಪೞುಗೞಿ** (ಕ್ರಿ). ಮೇರೆ ಮೀರು; ಅತಿಶಯಿಸು: ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪೞುಗೞಿದುದು ದಯೆ (ಶಾಂತಿಪು. ೧೦-೯೯); ಜಾನಕಿಯನುೞಿ ಸೆೞಿವಿಡಿದು ಬರುತ್ತುಮಾಕೆಯ ಪೞು[ಪಾಠಾಂ. ೞಿ]ಗೞಿದ ಗಾಡಿಯಂ ನೋಡಿ (ಪಂರಾಮಾ. ೯-೧೬೦ ವ); ಅೞಲಿರದ ಗ್ರಜಾತನ ವಿಯೋಗದೊಳಾಗೆ ಮನಕ್ಕೆ ಮೊಕ್ಕಳಂ ಪೞುಗೞಿದಿರ್ದ ತನ್ನ ಸಿರಿಯಂ ಮರುಭೂತಿ ಬಿಸುಟ್ಟು (ಪಾರ್ಶ್ವಪು. ೪-೫೦)

[ಪೞು₂ + ಕೞಿ₁]

**ಪೞುವ**, ಪಳವು, ಪಳು, ಪಳುವ, ಪಳುವು, ಪೞು₁, ಪೞುವು, ಹಳವು₁, ಹಳವು₂, ಹಳು₁, ಹಳುವ, ಹಳುವು (ನಾ). ೧. ಕಾಡು; ಅರಣ್ಯ: ನಿಮಗಿನ್ನುಮ್ಮಕೆವೇಡ ಪೞುವದೊಳ್ (ನೇಮಿಪು. ೧೦-೪೪). 'ಪೞುವಗಿಚ್ಚು' ಪರಾ. **ಪಳವು**: ೧. ನೈರುತ್ಯದೊಳು ಬಿದಿರ ಪಳವುಂ ಪಲ್ಮಕುಡಿವುಂ (ಸೌಇಇ. IX–i, ೧೨೧–೪೬; 1057). **ಪಳು**: ೧. "ಪಳುವೆನೆ ಕಾಡು" (ಕಶರ. ೫೮); ಕೇಡಳುರ್ಕೆಯ ಪಳುವನೇಂ ಪಳಿಯೆ ತಪ್ಪೆ (ಕಾಲೂರ. ೪೯-೬೨). **ಪಳುವ**: ೧. ಈ ದಟ್ಟಪಳುವದಲಿ ಮುಕುಂದನಂ ಕರೆವರಾರ್? (ಚಂದ್ರಸ. ೩೬-೧೧). **ಪಳುವು**: ೧. ಪುರಹರಂ ಬ್ರಹ್ಮಾಂಡಕೊಡೆಯನಾದೊಡೆ ದಿಗಂಬರನಾಗಿ ಪಳುವಿನೊಳ್ ತಿರುಗಿದನದೇತರ್ಕೆ (ಅರಾಚ. ೩-೧೧-೪); ಕೋಪದಿಂದ ಪಳುವಿನೊಳಿಂತಿರಿಸಿ ಪೋದಂ (ಕಾಮಕ. ೨-೩೫). **ಪೞು₁**: ೧. "ಪೞುವೆಂದುಂ, ಬಿಂಜವೆಂದುಂ ಅಡವಿ" (ಕಶಸಾ. ೫೦-೮೧); ಈ ಪೞುವಿನೊಳೆನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨-೨೨); ಮಗಳೇ ನೀನಿಲ್ಲದೆ ಮನೆ ಬಗೆವಂದೆನಗಟ್ಟಿ ತಿಂಬ ಪೞುವಾದುದು (ಧರ್ಮಾಮೃ. ೩-೨೪೩); ಬಗೆಗೆ ಸುಖದುಃಖಮುಂ . . . ಪೞು ಪೊೞಲುಂ ಪಗೆ ಕೆಳೆಯುಂ ಸಮನೆನೆಯಾ ಯೋಗಿಗೆ ಸಮತೆ ಸಮಂತು ಸಮನಿಸಿತ್ತು ಸಮಗ್ರಂ (ಪುಷ್ಪಪು. ೧೪-೧೬). **ಪೞುವು**: ೧. ಪೞುವಂ ಕಡಿದನೊಕ್ಕಲಿಗಂ (ಶಬ್ದಾನು. ೨೦೪ ಪ್ರಯೋ); ಕಿಚ್ಚಂ ಗಾಳಿಯುಮೊಂದೇ ಪೆರ್ಚುಗೆಯೊಳ್ ಬೆರಸಿ ಪೞುವಿನೊಣಗಿಡಮರನಂ ಚುರ್ಚುವವೊಲ್ (ಚಿಕವಿ. ೨-೪೬). **ಹಳವು₁**: ೧. ಬಟಾಬಯಲು ಇದು, ಹೋ ಅಭಂಡ ತಾನರ್ಥಹೀನ ಹಳವು (ಅರಳು. ೧೯೫-೩); ಅಡವಿ, ಹಳವು, ಗಡ್ಡೆ (ಕಂನುಹು. ೮೬). **ಹಳಿವು₂**: ೧. ಆವ ಹೊಲದಲು ಹಳಿವ ಕಡಿದುತ್ತ ಹದಂ ಬೇಡೆಂದೆನಲಾಗದು (ಎಕ. XII, ತಿಪಟೂ. ೩-೧೬; 1263). **ಹಳು₁**: ೧. ಮಹಾಅರಣ್ಯವಾಗಿಯಿದ ಹಳುವನೂ (ಎಕ. VII, ತಿಸಮೊ. ೩೦-೩೧; 1413 ?); ಹೋಳಿಯ ಮಂಟಪದೊಳಗೆ ಕುಳಿತು ಹಳೆಯ ನೆನಪನು ಮನಕೆ ತಂದೆನು: ಹಳುವ ತುಂಬಿದ ಗೋಳ ಹೊಳಲನು, ಹರಿದ ಕಂಬನಿ ಕಾಲ್ವೆಯ (ಮಾಂದಳಿ. ೨೬-೭). ೨. ಒಂದು ಬಗೆಯ ಕಾಡುಗಿಡ: ವರ್ಷ ವರ್ಷವೂ ಹಳು ಹುಟ್ಟಿ ಬೆಳೆದು ಒಣಗಿ ಹೊದಿಸಿದ್ದ ಹೆಂಚುಗಳಲ್ಲಿ

ಅರೆಪಾಲು ಮುಚ್ಚಿ ಹೋಗಿದ್ದವು (ಮಲೆನಸು. ೨೭). **ಹಳುವ: ೧.** ಹಳುವದಲಿ ಗಿರಿಶಿಖರದಲಿ ದಾವಾಗ್ನಿಮಧ್ಯದಲಿ ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾರ್ಜಿತಪುಣ್ಯಾವಳಿಗಳೆಂಬುದು ತನ್ನೊಳಾದುದು (ಕುಮ್ಯಾಗ. ೪-೨೫); ನಾನಾಹಳುವವನು ಬಳಸಿದರು ಬಂದರು (ತೊರಂರಾ. ೩-೧-೧೨); ರಘುವರಂ ಸೀತೆಯಂ ಹಳುವಕಟ್ಟಿದ ಬಳಿಕ ಪಿರಿದು ಕಕ್ಕುಲತೆಯಂ ತಳೆದು . . . ಕುಳ್ಳಿರ್ಪಿನಂ (ಶೇಷರಾ. ೫-೧); ಅವನಿರುವ ಹಳುವ ನಗರೋಪವನನಂದನ (ಯಶೋಧ. ೫). **ಹಳುವು: ೧.** ಪಾಂಡವರು ಹಳುವಿನೊಳಗೆ ಹನ್ನೆರಡುವರುಷವಿರ್ದು ಬಳಿಕೆಲ್ಲಿಗೆಯ್ದಿದರು (ನೇಮಿಸಂ. ೨೫-೧೨೪); ಈ ದ್ವೀಪದ ಪೂರ್ವಭಾಗದಲ್ಲಿ . . . ದಟ್ಟವಾದ ಹಳುವುಗಳುಂಟು (ಮುಂಬಯಿ. ೪-೨೦೧); ಹಳುವು ಆಡೆ ಕರೆವುದು (ಮೂಂದಳಿ. ೪೫-೩). [ದೇ.॥ ತವಿ. ಮಲ. ಪಟುವ]

**ಪಟುವಗಿಚ್ಚು** (ನಾ). ಕಾಡುಗಿಚ್ಚು; ದಾವಾಗ್ನಿ: "ಪಟುವಗಿಚ್ಚು ಕಾಟ್ಯುಚ್ಚಿನಿಪ್ಪುದು" (ಚತುರಿ. ೧೧೧). [ಪಟುವ+ಕಿಚ್ಚು]

**ಪಟುವಗೆ** (ನಾ). (ಅಲಂ). ಕಾಡುಬುದ್ಧಿ; ಕೆಟ್ಟಮನಸ್ಸು; ದುರ್ಬುದ್ಧಿ: ಆಕೆಯುವನ ಮನದ ಪಟುವಗೆಯನಱ[ಯ]ದಂತೆ ಗೆಯ್ವೆನೆಂದು (ಪಂಪಭಾ. ೮-೬೩ ವ); ಅನಿರಸುಗೆಯ್ವ ಪಟುವಗೆಯನದಂ ಪರಿಹರಿಸಿದೆಂ (ಪಂಪಭಾ. ೧೨-೧೭೫). [ಪಟು$_1$(<ಪಟುವ)+ಬಗೆ$_2$]

**ಪಟುವಡು** (ಕ್ರಿ). ಕಾಡನ್ನು ಸೇರು; ಅರಣ್ಯವನ್ನು ಹೊಗು: ದಶರಥಂ ತಪಂಬಟ್ಟುದುಮಂ ರಾಮಲಕ್ಷ್ಮಣರ್ ಪಟು[ಪಾಠಾಂ. ಟು] ವಟ್ಟುದುಮಂ ಚರವಚನದಿನಱದು (ಪಂರಾಮಾ. ೮-೫ ವ). [ಪಟು$_1$(<ಪಟುವ)+ಪಡು$_1$]

**ಪಟುವಟಲ್** (ನಾ). ನಿರ್ಜನಪ್ರದೇಶದಲ್ಲಿ ಅಳುವ ಅಳು; ಅರಣ್ಯರೋದನ: ಆನೊರ್ವಳೆ ಬಡವೆ ಬಱುವೆಯಾದೆಂ. ಉಃ! ಪೋಕೆ ಪಟುವಟಲಿನೇಂ? (ರಾಮಾಶ್ವ. ೪೦-೬). [ಪಟು$_1$(<ಪಟುವ)+ಅಟಲ್$_2$]

**ಪಟುವಟ್ಟೆ** (ನಾ). ಕಾಡುದಾರಿ; ಅರಣ್ಯಮಾರ್ಗ: ಪಟುವಟ್ಟೆಯಂ ತಗುಳ್ದಳುರ್ವ ಬೇಗೆವೊಲೆಚ್ಚ ಶರಾಳಿಗಳ್ ಛಟಾಲ್ಛಟಾಲೆನೆ ಪಾಯೆ (ಪಂಪಭಾ. ೮-೧೦೫). [ಪಟು$_1$(<ಪಟುವ)+ಬಟ್ಟೆ$_3$]

**ಪಟುವು** 'ಪಟುವ' ನೋ.

**ಪಟಿ** 'ಪಟ್ಟಿ$_1$' ನೋ.

**ಪಟಿನರೆ** (ನಾ). (ಅಲಂ) ಹಳೆಯದು; ಪ್ರಾಚೀನವಾದುದು; ಪುರಾತನವಾದುದು: ಮಂಗಳುಮನ್ ಪಟಿನರೆಯು ವಿಧಿ ಬಡಿದು ನರಲಿಸಿತ್ತು (ಅಂತಿಗೊ. ೪೪-೯೧೧). [ಪಟಿ(<ಪಟಿದು)+ನರೆ$_2$]

**ಪಟಿನವಿರ್** 'ಪಟಿನವಿರ್' ನೋ.

**ಪಟಿಯ** 'ಪಟಿದು' ಪರಾ.

**ಪಟಿಯುಪ್ಪು** (ನಾ). ಬಹಳದಿನಗಳಿಂದ ಶೇಖರಿಸಿ ಹಳೆಯದಾದ ಉಪ್ಪು: "ವಸುವೆನಲ್ ಪಟಿಯುಪ್ಪೆನಿಕ್ಕು" (ಮಂಗರಾ. ೪೩-೪೧). [ಪಟಿ(<ಪಟಿದು)+ಉಪ್ಪು$_1$]

**ಪಟಿಯೆಲೆ** (ನಾ). ಹಳೆಯ ಎಲೆ; ಹಣ್ಣೆಲೆ: ಪಟಿಯೆಲೆ ದೋಷತ್ರಯಮುಮಂ ಕಳೆವವೊಲೆಲೆಯೆಲೆ ಕಱಲ್ಕುವುದೆ (ಉದ್ಭಟ. ೧೦-೬೩). [ಪಟಿ(<ಪಟಿದು)+ಎಲೆ$_1$]

**ಪಟಿಯೊಲ್ಮೆ** (ನಾ). ಹಳೆಯ ಪ್ರೀತಿ; ಹಿಂದಿನ ಒಲುಮೆ: ಪಟಿಯೊಲ್ಮೆಯುಸ್ ಬಿಸುಟನ್ (ಅನ್ವತ್ಥ. ೩೨-೬೩೫). [ಪಟಿ(<ಪಟಿದು$_1$)+ಒಲ್ಮೆ]

**ಪಟಿವುಣ್**, ಹಳೆಹುಣ್ಣು (ನಾ). ಹಳೆಯ ಗಾಯ: ಪವಿಯ ಮುಖಘಾತದಿಂ ಜೋಣಿವೋದ ಪಟಿವುಣ್ಣ ಜಿಗುಟೆಯಂ ಬಿಟ್ಟವೊಲ್ (ಸೂಕ್ತಿಸು. ೩-೮೦); ಪಲದೆವಸಕ್ಕೆಮಗೀಗಳ್ ಕಲಹಂ ದೊರೆಕೊಂಡುದಿಲ್ಲಿ ಮೆಱೆದಪವಿಂ ದೋರ್ವಲದಳವನೆಂದು ಪಟಿವು[ಪಾಠಾಂ. ಟವು]ಣ್ಗಲೆಯೊಡೆವಿನಮುರ್ವಿ ಕೊರ್ವಿದರ್ ಕಡುಗಲಿಗಳ್ (ಚಂದ್ರಪ್ರ. ೧೦-೬೨).

**ಹಳೆಹುಣ್ಣು:** ಹಳೆಹುಣ್ಣಿಗೆ:—ಬೇವಿನ ಸೊಪ್ಪು, ಕಲುವು ಇವಂ ಅರೆದು ಬಿಸಿಮಾಡಿ ಕಟ್ಟಲು ಗುಣ (ವಿವೈ ವಿ. ೭೭). [ಪಟಿ(<ಪಟಿದು)+ಪುಣ್]

**ಪಟಿವೆಣ್** (ನಾ). ಹಿರಿಯಳಾದ ಹೆಣ್ಣು; ಅನುಭವಸ್ಥಳಾದ ಹೆಂಗಸು: ಪಟಿವೆಣ್ಣ ಸಗುವ ತೆಜದಿನೆಸಗಲಾರ್ಪಳೆ ಪೊಸವೆಣ್ (ಉದ್ಭಟ. ೧೦-೭೪). [ಪಟಿ(<ಪಟಿದು)+ಪೆಣ್]

**ಪಟ್ಕು** (ಕ್ರಿ). (?): ಪದಪಾಕಕ್ಕೊಳಗಾಗೆ ಬಾಗಿಸಿದ ರಾಜಾನ್ನಾನ್ನದೊಳ್ ಘಾಸಿಯಾಗದುದಂ ಸಜ್ಜುಕವಾಲ ಘಟ್ಟವೊಸರಂ ತಂದಿಕ್ಕಿ ಪಟ್ಕಿತ್ತೆ ನುಗ್ಗಿದ ಕರ್ಗಾಯ್ . . . ಕಟ್ಟದುದಂ ಕಾಮಿನಿ ತಂದು ನೀಡೆ ಕಲಸುಂಗೂಟಿಂ ಕರಂ ರಾಗದಿಂ (ಮಹಾನೀ. ೧೬-೪೯). [?]

**ಪಟಿಕ್ಕೆ, ಪಕ್ಕೆ$_1$, ಪಳ್ಕೆ, ಹಕ್ಕೆ** (ನಾ). ೧. ಹಾಸುಗೆ; ಶಯ್ಯೆ: "ಪಟಿಕ್ಕೆ-ಶಯನಂ, ಶಯನಸ್ಥಾನಂ" (ಶಮದ. ಪರಿ. ೧); ಈ ತಪೋಧನಂಗೆ ನಿವಾತಮಪ್ಪೆಡೆಯೊಳ್ ಪಟಿಕ್ಕೆಗೆಡೆಮಾಡಿ ಕುಡೆಂದು ಪೇಟ್ದು (ಪಂಚತಂ. ೬೩-೧೧); ನೀಹಾರಕರನಲಸಿ ಪಟಿಕ್ಕೆ[ಪಾಠಾಂ. ಕ್ಕೆ]ಗೆ ಸಾರಲೊಡಂ ಮುಗುಟಿ ಮರ್ಬು ಪರ್ಬಿತ್ತಾಗಳ್ (ಲೀಲಾವ. ೩-೯); ಮೇಲ್ವಾಯ್ದೇಂ ಪಟಿಕ್ಕೆಗೆಯ್ದು ತಟಿಕ್ಕೈಸುವೆನೋ (ಚಿಕವಿ. ೬-೨೧೩). ೨. ಮಲಗುವ ಸ್ಥಳ; ವಿಶ್ರಮಿಸುವ ಜಾಗ: "ಪಟಿಕ್ಕೆಯೆನಲ್ ಶಯನಸ್ಥಲಾಹ್ವಯಂ" (ಕರ್ಣಾಸ. ೭೪); "ಶಯನಮುಂ, ಶಯನದ ಉ[ಎ]ಡೆಯೊಳುಂ ಪಟಿಕ್ಕೆ" (ಸಂಜೀವ. ೧೫). ೩. ನೆಲೆ; ಆಶ್ರಯಸ್ಥಾನ: ಕಕ್ಕಿನ ಪಟಿಕ್ಕೆ ಕಾಳಿಯ ತವರ್ ಕವಡಿಂಗೆಡೆ . . . ಬೆಲೆವೆಣ್ಗಳ ಬೀದಿಯದೇಂ ಪೊದಟ್ದುದೋ (ಚಿಕವಿ. ೬-೭೪). ೪. ಹಕ್ಕಿಯ ಗೂಡು: ಬಱಯಗೂಡೊಳಗೆ ಮಱ ಕವರ್ದ್ದು ಪಟಿಕ್ಕೆಯನ್ ಕಂಡೊಡನೆ ಚೀಱ್ದಂತೆ ಚೀಱ್ದಳ್ (ಅಂತಿಗೊ. ೨೦-೪೧೨). **ಪಕ್ಕೆ$_1$:** ೧. "ಪಕ್ಕೆಯೆನೆ ಶಯನಮುಕ್ಕುಂ" (ಕವಿಕಂ. ೧೪೬); ಉದಯಾದ್ರಿಯ ಸೆಜ್ಜೆಕೆಕ್ಕೆ ಪಕ್ಕೆಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ (ಜಗವಿ. ೧೬-೧೦೩); ತುಱುಗಿದ ತನುತಾಪದಿಂದೆ ಪಕ್ಕೆಯ ತಳಿರ್ ತಱಗೆಲೆಯಾಗಿ ತೋಱುಸಲು (ಮೋಹತ. ೨೮-೧೬). ೨. "ಶಯ್ಯೆ ಮನೆಗಳೊಳ್ ಪಕ್ಕೆ" (ಶಬ್ದಮಂ. ೮೦). ೩. ಇದೆ ಸರ್ವಮೃಗಪಕ್ಷಿಗಳ ಪಕ್ಕೆಯೆಂದು . . . ಬೇಂಟೆಯಾಡುತ್ತಿರ್ದಂ (ಭಾಷಪಿಂ. ೫-೧೦); ವಿಪುಳಧರ್ಮಾವಾಸ ವಿಪುಳಪುಣ್ಯದ ಪಕ್ಕೆ (ತ್ರಿಭುತಿ. ೨-೧೧). ೪. ಅಳ್ಳಟಿಸೊಳೆ ಪಕ್ಕೆಗೆ ಸಾರ್ವ ವಿಹಂಗವೀಥಿ ಚೇತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ (೧೨ಕ. ೪-೬೬); ತಾಳಿತು ಕೆಂಪನಪರದಿಕ್ಕು ಪಕ್ಷಿಜಾಲ ಪಕ್ಕೆಗೆ ಸಾರಿದವು (ಜೀವಂಸಾಂ. ೫-೨); ಪಜ್ಜಳಿಸೆ ಪಡುಗೆಂಪು ಪಕ್ಕಿ ಪಕ್ಕೆಗೆ ಸಾರೆ (ಸಮ್ಯುಕೌ. ೧-೩೭). ೫. ಮೃಗಗಳ ವಾಸಸ್ಥಾನ; ಪ್ರಾಣಿಗಳ ಇಕ್ಕೆ: ಮೃಗಮಂ ಗಾಳಿಯಂ ಸಿರ್ಕೆಯುಂ ಪಕ್ಕೆಯುಂ . . . ಎಲ್ಲಿಂದದಿಂ ಬಗೆದಾಗಳ್ (ಪಂಪಭಾ. ೫-೪೩). **ಪಳ್ಕೆ:** ೧. ಕಸವರದ ತೃಷೆಯಿಂದೆ ಚಂಡಾಲ ರಾದೊಡಂ ಮಿಸುಪ ಪಳ್ಕೆಗೆ ಕರೆವರವಿಚಾರಿಗಳ್ (ಅರಾಚ. ೨-೫-೪೦). 'ಪಳ್ಕೆವನೆ' ಪರಾ. **ಹಕ್ಕೆ:** ೧. ತೊಡುವುದಾದೊಡೆ ಭೂತಿ ಹಕ್ಕೆಯ[ಪಾಠಾಂ. ಮಲಗುವ] ಹಾಸ ನೋಡಿದೊಡೆ ಕಡವಸಗಳಿಹ ವಾಸ ವಾದೊಡೆಯಡವಿಯು (ಪ್ರಭುಲೀ. ೨೦-೩೦). ೩. "ಇಕ್ಕೆ . . . ಹಕ್ಕೆ, ಗಡಿ, ಗರುಡಿ, ಆಗರಂ—ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೫೯-೨೯೦); ಹರನ ಹರುಷದ ಹಕ್ಕೆ ಪರಮೇಶ್ವರನ ಪರಿಣಾಮದ ಪಸರ

(ಪ್ರಭುಲೀ. ೨-೨೩); ದುರ್ನೀತಿಯ ಹಕ್ಕೆ ಹಾಸ್ಯದ ಹೊಲಂ . . . ಗಣಿಕಾಪ್ರತೋಳಿ ತಾಂ (ಹವಿಷ್ಣ್ರ. ೨-೯೨); ಹದಿರ್ ಚದುರುಗಳ ಹಕ್ಕೆ ಮೋಹನದಿಕ್ಕೆಯೆನಿಪ ವೇಶ್ಯಾಶ್ರಯಂ ಮುಂದೆ ಕಡುಚೆಲ್ವಾದುದು (ಚೆಬಪು. ೧೧-೩೭). ೪. ಹಕ್ಕೆಯಿಂದಗಲ್ವ ಚಕ್ರಂ ಹೂವನಬಿಸುವಳಿ . . . ನಲಿವ ಜಾರೆಯರು ಸಂಜೆಯೊಳು ರಂಜಿಸಿದರು (ಹಚಕಾ. ೩-೭೭). ೫. ಕೇಳಿದನು ಮೃಗದಿಕ್ಕೆ ಹಕ್ಕೆಯ ಗಾಳಿಯನು (ಕುವ್ಯಾಅ. ೪-೧೨); ಹಕ್ಕೆಗೆಯ್ದಿದವು ಹಲ ಮಿಗಗಳ್ (ಸಮ್ಯಕೌ. ೧೦-೨೪); ಇತ್ತಲಿದೆ ಹುಲ್ಲೆಗಳ ಹಕ್ಕೆ; ಮರಿಗಳಿಕ್ಕೆ (ಚಂದ್ರಸ. ೨೮-೧೦); ಮೃಗಗಳನ್ನು ಬೆಂಬತ್ತಿ ಅವುಗಳ ಹಕ್ಕೆಗಳನ್ನು ಕಂಡುಹಿಡಿದೆನು (ಮಣಿಪ. ೨೨). ೬. ದನಕರುಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ; ದೊಡ್ಡಿ: "ಹಕ್ಕೆಯೆನಲ್ ಮೃಗಾಲಯದೊಳಪ್ಪುದು" (ಕರ್ಣಾಸಿ. ೫೦); ಒಕ್ಕಲಿಗನ ಮನೆಯಲ್ಲಿ ದನದ ಹಕ್ಕೆಯೊಳಗೆ . . . ಅಡಗಿಕೊಂಡಿತು (ಮುಂಬಯು. ೪-೪೨); ಹಕ್ಕೆಯನ್ನು ಬಳಿದು ಹಸ ಮಾಡಿದಳು (ಎರಸಿ. ೫೮).

[<ಪಡು₁./ತುಳು. ಪರ್ಕೆ; ತೆಲು. ಪಕ್ಕ]

**ಪಱ್ಕೆಗೆಡು** (ಕ್ರಿ). ಆಶ್ರಯ ತಪ್ಪು; ನೆಲೆಯಿಲ್ಲದಾಗು: ಹಗೆವೊಯ್ದಿರಲೆಯು, ಪಱ್ಕೆಗೆಟ್ಟ ನರಿಯು . . . ಗಜಬಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೮೪-೮). [ಪಱ್ಕೆ + ಕೆಡು₁]

**ಪಱ್ಕೆಗೆಯ್** (ಕ್ರಿ). ಮಲಗು; ವಿಶ್ರಮಿಸು: ನಿನ್ನ ಕುಚಮಧ್ಯದೊಳೊಯ್ಯನೆ ಪಱ್ಕೆಗೆಯ್ದು ನಾನೆಳಸಿ ಸುಖಂಗಳಂ ಸವಿವ ಕಾಲಮದೆಂದೆನಗಪ್ಪುದಂಗನೇ (ಕಾವ್ಯಸಾ. ೫೭೫). [ಪಱ್ಕೆ + ಕೆಯ್₁]

**ಪಱ್ಕೆತಱ್ಕೈಸು ?** (ಕ್ರಿ). ಗಾಢವಾಗಿ ಅಪ್ಪು; ಬರಸೆಳೆ(?): "ಪಱ್ಕೆತಱ್ಕೈಸಿದಂ= ತಡಕಯ್ಯಂ ಮಾಡಿದಂ" (ಶಮದ. ಪರಿ. ೧); ಪಱ್ಕೆತಱ್ಕೈಸಿದನೆಂಬಲ್ಲಿ ತಡಕೈಯಂ ಮಾಡಿದನೆಂಬರ್ಥಂ (ಶಮದ. ೧೯ ಪ್ರಯೋ). [ಪಱ್ಕೆ ? + ತಱ್ಕೈಸು]

**ಪಱ್ಕೆವನೆ,** ಪಕ್ಕೆವನೆ, ಪಳ್ಕೆವನೆ (ನಾ). ಮಲಗುವ ಮನೆ; ಶಯ್ಯಾಗೃಹ: "ಸೆಜ್ಜೆವನೆ, ಪಱ್ಕೆವನೆ—ಈ ೨ ಶಯ್ಯಾಗೃಹಂ" (ಕಶಸಾ. ೬೦-೩೧೭); ಬೆಳಗಪ್ಪ ಸಮಯದೆಯೆೞ್ದೊಯ್ಯನೆ ಪಱ್ಕೆವನೆಯಂ ಪೊಱಮಟ್ಟು (ಉದ್ಭಟ. ೧೦-೧೩೬ ವ). **ಪಕ್ಕೆವನೆ:** "ಪಕ್ಕೆವನೆಯೆನ್ನಲದು ತಾನಕ್ಕು ಶಯ್ಯಾಗೃಹಕ್ಕೆ ನಾಮಂ" (ಕವಿಕಂ. ೧೪೬); ಪಕ್ಕೆವನೆಗಾಗಿ ನಡೆತಂದಳು ರಾಯನ ರಾಣಿ (ಸೊಬಸೋ. ೨-೮); ಪಕ್ಕೆವನೆಗೆ ನಡೆತಂದಳಂಜನೆದೇವಿ (ಅಂಜಚ. ೮-೮೧). **ಪಳ್ಕೆವನೆ:** ಕೈವಿಡಿದವನಂ ಪಳ್ಕೆವನೆಗವಳ್ಕೊಂಡೊಯ್ದಳ್ (ವೀರವಿ. ೬-೬೭).

[ಪಱ್ಕೆ+ಮನೆ]

**ಪಱ್ಕೆವೆಟ್ಟು,** ಪಕ್ಕೆವೆಟ್ಟ, ಪಕ್ಕೆವೆಟ್ಟು (ನಾ). ಸೂರ್ಯನು ವಿಶ್ರಮಿಸುವ ಬೆಟ್ಟ; ಪಶ್ಚಿಮಬೆಟ್ಟ; ಪಡುವೆಟ್ಟ: ಪೊಂಬಿಸಿಲಾದುದು ಪೊರ್ದೆ ಪಱ್ಕೆವೆಟ್ಟಮ[ಪಾಠಾಂ. ಪಕ್ಷವೇದಿಯ]ನರ್ಕಂ (ಪಂರಾಮಾ. ೧೧-೧೭೭). **ಪಕ್ಕೆವೆಟ್ಟ:** ನಭೋಲಕ್ಷ್ಮಿ ಸಕಳಪ್ರಕಾಶವಂ ಮೊಟ್ಟೆಗಟ್ಟಿ ಪಕ್ಕೆವೆಟ್ಟದಿಟ್ಟೆಡೆಗೆ ಕಳಿಪಿದ ಕಟ್ಟೀವದ ಪೊಟ್ಟಳಮೆಂದೆಂಬಿನಂ ದ್ಯುಮಣಿ ಚರಮಾಚಳಶಿರೋಮಣಿಯುಮಪ್ಪುದುಂ (ವರ್ಧಪು. ೬-೨೩ ವ); ಚೆಂಗೊಡೆಯಂತಿರ್ದುವು ಪಕ್ಕೆವೆಟ್ಟದೆಡೆಯೊಳ್ ನೀಹಾರರುಙ್ಮಂಡಲಂ (ಸೂಕ್ತಿಸು. ೯-೧೨). **ಪಕ್ಕೆವೆಟ್ಟು:** ಅಂತು ಕಾದಿ ಕಡೆಗಾಲದ ಬೞಿಸಿಡಿಲ ಬಳಗದೊಳ್ ಕೊಡರ್ದ ಪಕ್ಕೆವೆಟ್ಟುಗಳ ತಱ್ಕೆಯಂತೆಯುಂ (ಚಂದ್ರಪ್ರ. ೧೦-೮೭ ವ). [ಪಱ್ಕೆ + ಬೆಟ್ಟ]

**ಪಱ್ಕೆಸಾರ್** (ಕ್ರಿ). ಹಾಸುಗೆಯನ್ನು ಸೇರು; ಮಲಗು: ನಿದ್ರಾತುರನಾಗಿ ಪಱ್ಕೆ[ಪಾಠಾಂ. ಕ್ಕೆ]ಸಾರ್ವಂತಿರೆ ಸಾರ್ದಂ ಚಂದ್ರನಪವೇಲಾವನಮಂ (ಕಾದಂಉ. ೧೬೧). [ಪಱ್ಕೆ + ಸಾರ್]

**ಪಱ್ಗಿ,** ಹಱ್ಗಿ (ನಾ). ಹಣ್ಣಿಗೆ ಬಂದ ಕಾಯಿಗಳನ್ನು ಹೊಗೆ ಹಾಕಿ ಹಣ್ಣು ಮಾಡುವುದು,—ಅಡೆಹಾಕುವುದು,—ಮಾಗಿಸುವುದು: (?). **ಹಱ್ಗಿ:** "ಹಱ್ಗಿ = ದೂವೆಯೊಳ್ ತಟಲಂ ಪೊಟ್ಟ ಕ್ರಿಯೆ" (ಶಮದ. ಪರಿ. ೧). ℙ ಈ ಶಬ್ದರೂಪಗಳ ಬಗೆಗೆ ಸಿದ್ಧವಾದ ಅಭಿಪ್ರಾಯವಿಲ್ಲ. [?]

△ **ಪಱ್ಬು** 'ಪರ್ಬು₁' ನೋ.

**ಪಱ್ತಿ,** ಪತ್ತಿ₁, ಪರ್ತಿ, ಪಳ್ತಿ, ಹತ್ತಿ₁ (ನಾ). (ಬೀಜಸಹಿತವಾದ) ಅರಳೆ; ಕಾರ್ಪಾಸ; ತೂಲ: "ಪಿಚವ್ಯಃ, ಬಾದರಃ, ಕಾರ್ಪಾಸಃ—ಈ ೩ ಪಱ್ತಿ (ಹತ್ತಿ)" (ಹಲಾಯು. ೩೪-೪೯); ಮಳವೆಗೆ ಪಱ್ತಿ ಪದಿನಾಱು ಪಲಂ (ಎಇ. IX, ೨೨-೭; 800); ಬಂಡಿಗಳೊಳ್ ಪಱ್ತಿ[ಪಾಠಾಂ. ತ್ತಿ]ಯುಂ ಧಾನ್ಯಮಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೬-೧೧); ಕಪ್ಪಡಕ್ಕೆ ಪಱ್ತಿಯುಂ ಬ್ರಹ್ಮಲಿಂಗಭಟರ್ಗೆ ಕೊಟ್ಟುದು (ಮೈಆರಿ. ೧೯೪೬, ೨೮-೧೯; 1032). **ಪತ್ತಿ₁:** ಪತ್ತಿಯಂ ಕಿಚ್ಚು ತಗುಳ್ದಂತೆ (ಧರ್ಮಾಮೃ. ೨-೭೧); ನಾಡೆಯುಂ ನೂಲುಂ ಪತ್ತಿಯುಮಂ ಸಂಗ್ರಹಂಗೆಯ್ದು (ಬಂಹರಿ. ೪-೧೦ ವ); ಪತ್ತಿಸುವನಜ್ಞಾನಮಾರ್ಗದ ಪತ್ತಿಯಂ (ಶಂಕದಾ. ೪-೩೧). **ಪರ್ತಿ:** ಒಕ್ಕಲು ಪಣಂ ಮೂಱು ಪರ್ತಿಯ ಮಳವೆ ಪನ್ನೆರಡು ಇನ್ನಿನಿತುಮಂ ಪರಿಪಪ್ರತಿ ಬಿಟ್ಟರ್ (ಎಇ. XVI, ೩೩೧-೨೧; 1077). **ಪಳ್ತಿ:** ಮಱಿವೊಕ್ಕ ಬಳಿಕೆ ಕಲ್ಪಪದುಱುವೆಂಬುದು ಪಳ್ತಿಯೊಟ್ಟಲಗ್ನಿಯ ತೆಱದಿಂತುೞಿ ಬೞಿದಪ್ಪುದು (ವಿಷ್ಣುಪು. ೧-೨-೧೭೫); ಕಿರ್ಚು ಪಳ್ತಿಯ ರಾಸಿಯಂ ದಹಿಸಿ ಬಿಡುವಂತೆ (ಭಾರಶಾಂ. ೧-೪). **ಹತ್ತಿ₁:** "ಹತ್ತಿ ಕಾರ್ಪಾಸಂ ಪಿಚವ್ಯಮಾ ಬಾದರಂ ಅರಳೆ ಪಿಚು ತೂಳಕಾಖ್ಯಂ" (ಮಂಗರಾ. ೩೮-೨೬); ಸಲುವುದು ಹತ್ತಿಯಡಕೆಯೆಂಲೆ (ಎಕ. VIII, ಸೊರಬ. ೩೨೮-೬೨; 1159); ಧರಣಿ ಹತ್ತಿಯ ಶಯುನದಂಡದಿ ವರಮುನಿಗೆ ತಾನಾಗೆ (ಕುವ್ಯಾಅ. ೨೫-೨೪); ಎಡೆಗೆಡೆಗೆ ಹತ್ತಿಗಳ ಹೊಱೆಗಳ ಹೊಡಬಿದರಳೆಯ ಸುತ್ತಿದರು (ತೊರರಾ. ೫-೮-೮); ಹತ್ತಿ ತೂಗುವಲ್ಲಿ ನೊಣಕ್ಕೆ ಉಪವಾಸ (ಗಾದೆ).

[ದೇ.॥ ತಮಿ. ಮಲ. ಪರುತ್ತಿ; ತುಳು. ಕುಇ. ಕುವಿ. ಪರ್ತಿ: ತೆಲು. ಪತ್ತಿ, ಪ್ರತ್ತಿ; ಕೊಡ. ಪರತಿ]

**ಪಱ್ತಿಂಗೞ್** (ನಾ). (?): ಒನ್ದಡಿ ಪಾನಿಯೆಂ ಏೞುಂ ಒನ್ಸತ್ತಿ ದಿವಸಂ ಪಱ್ತಿಂಗೞ್ ತಪುಸಿ ಮೂಱ್ ದಿವಸಂ ವೇಸನೆ ಈ ××× ರೆ ಉಟ್ಪಿದು (ಎಕ. III, ಮೈಸೂರು. ೫೫-೮; ಸು. 740). [?]

**ಪಱ್ತಿಯಮಱ್ತವುರ,** ಪತ್ತಿಯಮತ್ತಉರ (ನಾ). ಒಂದು ಊರಿನ ಹೆಸರು; ℙ ಈಗಿನ ಧಾರವಾಡ ಜಿಲ್ಲೆಯ ಹತ್ತಿಮತ್ತೂರು: ಪಱ್ತಿಯಮಱ್ತವುರದ ನೂಱ್ಪ್ಪದಿವ್ಬೊರುಮಿಱ್ದು ದಯೆಗೆಯ್ಯೆ ಕಚ್ಚವರ ಕಾದಮ್ಮನ ಪುತವುರಂ ಬಿಡಿಸಿದೊಂ (ಇಆ. XII, ೨೨೫-೮; 916). **ಪತ್ತಿಯಮತ್ತಉರ:** ಪತ್ತಿಯಮತ್ತಉರದ ದಂಡಿನೊಳು ಕಿಱಿಯ ಸಿರಿಉರದ ಸಾಯಿರಮತ್ತರ್ ಪೊಲನಂ (ಎಇ. III, ೨೩೪-೪೫; ಸು. 1070). [ಪಱ್ತಿ + ? + ಪುರ₂]

**ಪಱ್ದಲ** 'ಪರ್ದಲ' ನೋ.

**ಪಱ್ಪಟ** 'ಪಟಪಟ' ನೋ.

**ಪಱ್ಪಟನೆ** 'ಪಟಪಟನೆ' ನೋ.

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು